ಲಲಿತ ಸಾಹಿತ್ಯ ಮಾಲೆಯ ೧೨ನೆಯ ಕುಡಿ

# ಇಂದಿನ ಕರ್ನಾಟಕ



ಸಂಪಾದಕರು:

ಪ್ರೊ. ವಿ. ಕೃ. ಗೋಕಾಕ

ಬಿ. ಎ. (ಆಕ್ಸಫರ್ಡ)



ಲಲಿತ ಸಾಹಿತ್ಯ ಮಾಲೆ ಧಾರವಾಡ

೧೯೪೫]; [೧-೮-೦

ಸಂಪಾದಕರು:
ಚುಳಕಿ ಗೋವಿಂದರಾಯರು
ಲಲಿತ ಸಾಹಿತ್ಯಮಾಲೆ, ಧಾರವಾಡ



ಮಾರಾಟಗಾರರು
ಮನೋಹರ ಗ್ರಂಥ ಭಾಂಡಾರ, ಧಾರವಾಡ
ಕನ್ನಡ ಪುಸ್ತಕಾಲಯ, ಬೆಳಗಾವಿ

೩ನೆಯ ವರ್ಷದ ಮೊದಲನೆಯ ಕುಡಿಯು

# ಹಕ್ಕಿಯ ನೋಟ

(ವ್ಯಕ್ತಿ ಚಿತ್ರಗಳು)

ಶ್ರೀ. ದತ್ತಾತ್ರೇಯ ಕುಲಕರ್ಣಿ

ಲ. ಸಾ. ಮಾಲೆ, ಧಾರವಾಡ

ಪ್ರಕಾಶಕರು
ದ. ಬಾ. ಕುಲಕರ್ಣಿ
ಮನೋಹರ ಗ್ರಂಥ ಭಾಂಡಾರ
ಧಾರವಾಡ

ಮುದ್ರಕರು
ಕೆ. ಜಿ. ರಾಯದುರ್ಗ
ಮೋಹನ ಮುದ್ರಣಾಲಯ
ಧಾರವಾಡ

SHASTRY & Co.
Book Sellers & Publishers
Kopbal & Hydrabad (Dn

## ಸಂಪಾದಕರ ಬಿನ್ನಹ

ನಮ್ಮ ಮನೋಹರ ಗ್ರಂಥ ಭಾಂಡಾರದಿಂದ ಪ್ರಕಟನೆಗಳನ್ನೇನೋ ನಾವು ಪ್ರಕಟಿಸುತ್ತಲಿದ್ದೆವು. ಅವು ನಿಯತಕಾಲಿಕವಾಗಿ ಪ್ರಕಟವಾಗುತ್ತಿರಲಿಲ್ಲ. ಹಾಗಾಗಬಾರದೆಂದು ಈ ಲಲಿತ ಸಾಹಿತ್ಯಮಾಲೆಯನ್ನು ಹೊರಡಿಸುವ ನಿಶ್ಚಯ ಮಾಡಿದೆವು. ಆಗ, ಈಗ ಮುಗಿದಿರುವ ೨ನೆಯ ಮಹಾಯುದ್ಧವು ತಲೆದೋರಿ ಇಡಿ ಜಗತ್ತು ಯುದ್ಧದ ವಾತಾವರಣದಿಂದ ತಲ್ಲಣಗೊಂಡಿತ್ತು. ಬೆಲೆಗಳೂ ಮಿತಿವಿರಾರಿ ಏರಿದವು. ಸಾಮಾನುಗಳೂ ಸಿಗದಾದವು. ಅದರಂತೆ ಕಾಗದವೂ ದೊರೆಯದಾಯಿತು. ಕಾಗದದ ಅಭಾವದಿಂದ ಪ್ರಕಟನೆಗಳು ತಡೆಹಿಡಿಯಲ್ಪಟ್ಟವು. ಅದರಲ್ಲಂತೂ ಕಾಗದದ ಕಾಯದೆಯೂ ಬಂದು ಇನ್ನಿಷ್ಟು ಬಿಗುವು ಮಾಡಿತು. ಇಷ್ಟೆಲ್ಲ ಅಡೆತಡೆಗಳಿಗೀಡಾಗಿ ನಮ್ಮ ಲ. ಸಾ. ಮಾಲೆಯು ಮೂರು ವರ್ಷ ಮೂರು ತಿಂಗಳುಗಳಲ್ಲಿ ಎರಡು ವರ್ಷಗಳನ್ನು ಇಂದಿಗೆ ದಾಟಿತೆಂದು ಹೇಳಬಹುದು. ಈ ಸಂಕಟದ ಸಮಯದಲ್ಲಿ ಮಾಲೆಯು ಜೀವ ಹಿಡಿದುಕೊಂಡು ಬದುಕಿದುದೇ ನಮ್ಮ ಭಾಗ್ಯವೆಂದು ನಾವು ಭಾವಿಸಿದ್ದೇವೆ.

ಪ್ರಚಾರಕಾರ್ಯವೇ ನಮ್ಮ ವ್ಯಾವಹಾರಿಕ ಜೀವನದ ಗುರಿಯೇ ಆಗಿದ್ದರೂ ಎಚ್ಚೆತ್ತ ಕರ್ನಾಟಕದಲ್ಲಿ— ಏಕೀಕೃತವಾಗಲಿರುವ ಭಾವೀ ಕರ್ನಾಟಕದಲ್ಲಿ ಸಾಹಿತ್ಯದ ಚಟುವಟಿಕೆಗಳು ಫಲದ್ರೂಪವಾಗುತ್ತಿರುವ ಕಾಲದಲ್ಲಿ ನಮ್ಮ ಲ. ಸಾ. ಮಾಲೆಗೆ ೧೫೦ ಚಂದಾದಾರರು ದೊರಕಿದ್ದಾರೆ! ಇಷ್ಟು ಚಂದಾದಾರರಿಂದ ಈ ಮಾಲೆ ಬದುಕಬೇಕೆಂತೋ ತಿಳಿಯದಾಗಿದೆ. ಆದರೂ ನಾವು ಏನಾದರೂ ಆಗಲಿ, ಮಾಲೆಯನ್ನು ನಿಲ್ಲಿಸಬಾರದೆಂದೇ ನಿಶ್ಚಯಿಸಿದ್ದೇವೆ. ನಮ್ಮ ಈ ದೃಢನಿಶ್ಚಯವು ಈಡೇರುವಂತೆ ಕನ್ನಡ ಸಾಹಿತ್ಯ ಪೋಷಕರು ಬೆಂಬಲಕ್ಕೆ ನಿಂತು ನಮ್ಮ ಮಾಲೆಯನ್ನು ಪೋಷಿಸುವರೆಂಬ ಭರವಸೆಯೂ ನಮಗಾಗಿದೆ ಎಂದು ಹೇಳಬಯಸುತ್ತೇವೆ.

ಈ 'ಇಂದಿನ ಕರ್ನಾಟಕ' ವು ನಮ್ಮ ಮಾಲೆಯ ೨ನೆಯ ವರುಷದ ಆರನೆಯ ಕುಡಿಯು. ಈ ವರ್ಷದ ಕೊನೆಯ ಈ ಕುಡಿಯನ್ನು ನಮ್ಮ ಬಿನ್ನಹದ ಮೇರೆಗೆ ಪ್ರೊ. ವಿ. ಕೃ. ಗೋಕಾಕ ಬಿ. ಎ. (ಆಕ್ಸಫೋರ್ಡ)

ಇವರು ಸಂಪಾದಿಸಿ ನಮಗೆ ಕೊಟ್ಟಿದ್ದಾರೆ. ವ್ಯಕ್ತಿಗಳ ರೇಖಾಚಿತ್ರದಂತೆ ನಾಡಿನ, ಪಟ್ಟಣಗಳ ಚಿತ್ರವನ್ನೂ ಬರೆಯಬಹುದಲ್ಲ ಎಂದು ಬಗೆದು ಪ್ರೊ. ಗೋಕಾಕರು ಈ ಲೇಖನಮಾಲೆಯನ್ನು "ಜೀವನ" ಮಾಸಪತ್ರಿಕೆಯಲ್ಲಿ ಪ್ರಕಟಿಸಹತ್ತಿದರು. ಈ ಪ್ರಚೋದನೆಯಿಂದ ಹುರುಪುಗೊಂಡು ಶ್ರೀ. ಶಿವರಾಮ ಕಾರಂತ "ವಿಹಾರಿ" ಸಿಂಪಿ ಲಿಂಗಣ್ಣ, ವೆಂಕಟರಾವ ಬಿದರಕುಂದಿ, ರಾ. ಬಾ. ಲಕ್ಷ್ಮೇಶ್ವರ, ದತ್ತಾತ್ರೇಯ ಕುಲಕರ್ಣಿ, ಮು. ಗ. ಶೆಟ್ಟಿ ಇವರು ಇಂಥ ಲೇಖನ ಬರೆದರು. ಅವೆಲ್ಲನ್ನೂ ಸಂಗ್ರಹಿಸಿ ಪುಸ್ತಕರೂಪದಿಂದ ಕೊಡಬಹುದು ಎಂಬ ವಿಚಾರ ಹೊಳೆಯಿತು. ಅದರ ಫಲವಾಗಿಯೇ "ಇಂದಿನ ಕರ್ನಾಟಕವು" ನಮ್ಮ ವಾಚಕರ ಕೈಸೇರುತ್ತಲಿದೆ. ಈ ಲೇಖನಗಳನ್ನು ಸಂಪಾದಿಸಿ ನಮಗೆ ದಯಪಾಲಿಸಿದ ಪ್ರೊ. ಗೋಕಾಕ ಅವರಿಗೂ, ಉಳಿದ ಲೇಖಕರಿಗೂ ನಾವು ನಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ನಮ್ಮ ಲ. ಸಾ. ಮಾಲೆಯ ೩ನೆಯ ವರುಷದಲ್ಲಿಯೂ ೬೦೦ಪುಟಗಳ ಸಾಹಿತ್ಯವನ್ನು ಕೊಡಬೇಕೆಂದು ನಿರ್ಧರಿಸಿದ್ದೇವೆ. ೨ನೇ ಮಹಾಯುದ್ಧವು ನಿಂತದ್ದರಿಂದಲೂ ಶಾಂತಿಮಯ ವಾತಾವರಣವುಂಟಾಗುವ ಸಂಭವವಿರುವದರಿಂದಲೂ ನಮಗೆ ಕಾಗದ, ಮುದ್ರಣಸೌಕರ್ಯ ಮೊದಲಿನಂತೆ ದೊರೆಯಬಹುದೆಂಬ ನಂಬಿಗೆಯಿಂದಲೂ ನಾವು ಈ ವರ್ಷದ ಚಂದಾಹಣವನ್ನು ಒಂದು ರೂಪಾಯಿ ಕಡಿಮೆ ಮಾಡಿದ್ದೇವೆ. ಅಂದರೆ ಅಂಚೆ ವೆಚ್ಚ ಸಹಿತ ಸಾದಾ ಬುಕ್ಕ ಪೋಸ್ಟಿನಿಂದ ೪-೦-೦ ಇಡಲಾಗಿದೆ. ರಜಿಸ್ಟರದಿಂದ ಪುಸ್ತಕ ತರಿಸಿಕೊಳ್ಳುವವರಿಗೆ ೫-೦-೦ ಚಂದಾ ಇರಿಸಿದೆ.

೩ನೆಯ ವರ್ಷದ ಮೊದಲನೆಯ ಪುಸ್ತಕವಾದ 'ಹಕ್ಕಿಯ ನೋಟ' ವನ್ನು ಚಂದಾದಾರರಿಗೆಲ್ಲರಿಗೂ ವಿ. ಪಿ. ಯಿಂದ ಕಳಿಸಲಾಗುವದು. ದಯವಿಟ್ಟು ಎಲ್ಲರೂ ಸ್ವೀಕರಿಸಿ ನಮ್ಮನ್ನು ಪ್ರೋತ್ಸಾಹಿಸುವಿರೆಂದು ನಂಬಿದ್ದೇವೆ.

ಹೊದಿಕೆಯ ಮೇಲಿನ '**ಕನ್ನಡಾಂಬೆ**'ಯ ಪಡಿಯಚ್ಚನ್ನು ಮುದ್ರಣಗೊಳಿಸಲು ಒಪ್ಪಿ ನಮಗೆ ದಯಪಾಲಿಸಿದ್ದಕ್ಕಾಗಿ ಚಿತ್ರಶಿಲ್ಪಿಗಳಾದ ಶ್ರೀಮಾನ ಬೆಳಗಾವಿ ರಾಮಚಂದ್ರರಾಯರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

**ಸಂಪಾದಕರು**

# ಮುನ್ನುಡಿ

‘ ಇಂದಿನ ಕರ್ನಾಟಕ ’ ಎಂಬ ಲೇಖನಮಾಲೆಯನ್ನು ‘ ಕ್ರಾಂತಿ ಪ್ರಿಯ ’ ಎಂಬ ಹೆಸರಿನಿಂದ ಕೆಲವು ವರ್ಷಗಳ ಹಿಂದೆ ಜೀವನದಲ್ಲಿ ನಾನು ಪ್ರಾರಂಭಿಸಿದೆನು. ವ್ಯಕ್ತಿಗಳ ರೇಖಾಚಿತ್ರಗಳನ್ನು ಬರೆಯುವದು ಸಾಧ್ಯ ವಿದ್ದಂತೆ ನಮ್ಮ ನಾಡಿನ ನಗರ–ಗ್ರಾಮಗಳ ಚಿತ್ರವನ್ನು ಬರೆಯುವದೂ ಸಾಧ್ಯವಲ್ಲದೆ ಪ್ರಯೋಜನಕಾರಿಯೆಂದು ನನಗೆನಿಸಿತು. ನನಗೆ ಗೊತ್ತಿದ್ದ ಆರೇಳು ಸ್ಥಳಗಳ ಭಾವಚಿತ್ರವನ್ನು ಬರೆದು ಮುಂದೇನೆಂದು ಯೋಚನೆ ಗೊಳಗಾಗುವಷ್ಟರಲ್ಲಿ ಬಳ್ಳಾರಿಯ ಶ್ರೀ. ವೆಂಕಟ ಸೆಟ್ಟಿಯವರು (ಜೀವನದ ‘ ವಿಹಾರಿ ’ಯವರು) ತಮ್ಮ ಕಲಾದೃಷ್ಟಿ–ಅನುಭವಗಳ ಕಾಣಿಕೆಯನ್ನು ಈ ಲೇಖನಮಾಲೆಗೆ ಒಪ್ಪಿಸಿದರು. ಈ ಮಾಲೆಗೆ ಗೆ. ಶಿವರಾಮ ಕಾರಂತರ ನೆರ ವನ್ನು ಪಡೆಯುವದು ಸಾಧ್ಯವಾಯಿತು. ಗೆ. ಸಿಂಪಿ ಲಿಂಗಣ್ಣನವರಂಥ ಸ್ನೇಹಿತ–ಸಾಹಿತಿಗಳೂ ಕೆಲವು ಜನ ತರುಣ ಲೇಖಕರೂ ಅದರ ಬೆಳುವಣಿ ಗೆಗೆ ನೆರವಾದರು. ಇಂದು ಪುಸ್ತಕರೂಪದಲ್ಲಿ ಜನತೆಗೆ ಈ ಸಂಗ್ರಹ ವನ್ನರ್ಪಿಸಲು ಆನಂದವೆನಿಸುತ್ತಿದೆ.

ಇಂದಿನ ಕರ್ನಾಟಕದಂತೆ ಈ ಲೇಖನಮಾಲೆಯೂ ಒಂದು ಹೊಸ ಹೊಂಚಾಗಿದೆ. ‘ ‘ ಧಾರವಾಡ ’ ದ ಚಿತ್ರದಲ್ಲಿ ಈ ಮಾತಿನ ಸಮರ್ಥನೆಯಿದೆ. ಇಲ್ಲಿ ಸಾಧಿಸಲು ಪ್ರಯತ್ನಿಸಿದ್ದು ಬರಿ ಭೂಗೋಲವಲ್ಲ; ಭೂಗೋಲ ವಿಜ್ಞಾನದ ಆತ್ಮವಿಕಾಸ. ಮಣ್ಣು, ಉಸಿರು, ಮನಸ್ಸು, ಬುದ್ಧಿ ಮೊದಲಾದ ಸಾಮುಗ್ರಿಗಳ ಕೂಟವನ್ನು ಬಳಸಿಕೊಂಡು ಓರ್ವ ವ್ಯಕ್ತಿಯ ವ್ಯಕ್ತಿತ್ವವು ಬೆಳೆಯುವಂತೆ ಹವಾಮಾನ, ಋತುಮಾನ, ಐತಿಹಾಸಿಕ ಚಾರಿತ್ರ್ಯ, ರಾಜ ಕಾರಣ ಮೊದಲಾದ ಅಂಗಗಳನ್ನು ಸೇರ್ಪಡಿಸಿಕೊಂಡ ಒಂದೊಂದು ಸ್ಥಳವೂ ಒಂದೊಂದು ವೈಶಿಷ್ಟ್ಯವನ್ನೂ ಮಹತಿಯನ್ನೂ ಪಡೆದಿರುತ್ತದೆ. ಇಪ್ಪತ್ತ ನೆಯ ಶತಮಾನದಲ್ಲಿ ಜನ್ಮ ತಾಳಲಿರುವ ಅಖಂಡ ಕರ್ನಾಟಕದ ದೃಷ್ಟಿಯಿಂದ ಕನ್ನಡ ನಾಡಿನಲ್ಲಿಯ ಪಟ್ಟಣ–ಹಳ್ಳಿಗಳಲ್ಲಿ ಬೆಳೆದು ಬರುತ್ತಿರುವ ಹೊಸ ಜೀವನವನ್ನು ಇಲ್ಲಿ ಚಿತ್ರಿಸಲು ಹವಣಿಸಿದೆ.

ಜಗತ್ತಿನ ಎಲ್ಲ ಸಂಸ್ಕೃತಿಗಳ ಇತಿಹಾಸವನ್ನು ಪರಿಶೀಲಿಸಿದಾಗ,—ಒಂದೊಂದು ನಗರವು ಒಂದೊಂದು ಸಂಸ್ಕೃತಿಯ ಪ್ರತೀಕವಾಗಿ ನಿಂತಿರುವದು ನಮಗೆ ಕಂಡುಬರುತ್ತದೆ. ನಳಂದಾ, ತಕ್ಷಶಿಲೆ, ಅಥೆನ್ಸ್, ಪ್ಯಾರಿಸ್, ಲಂಡನ್, ನ್ಯೂಯಾರ್ಕ,—ಇವೆಲ್ಲ ಒಂದೊಂದು ಸಂಸ್ಕೃತಿಯ ಕೇಂದ್ರಗಳಾಗಿದ್ದವು; ಆಗಿವೆ. ವ್ಯಕ್ತಿಗೆ ಒಂದು ವ್ಯಕ್ತಿತ್ವವಿರುವಂತೆ ವ್ಯಕ್ತಿಸಮುದಾಯಗಳಾದ ಪಟ್ಟಣ-ಹಳ್ಳಿಗಳಿಗೂ ಒಂದೊಂದು ವ್ಯಕ್ತಿತ್ವವಿರುತ್ತದೆ. ಮೂಡಲಿದ್ದ ಈ ವ್ಯಕ್ತಿತ್ವವನ್ನು ಬಣ್ಣಿಸಿ ಜಾಗೃತವಾಗಲಿದ್ದ ಕನ್ನಡನಾಡಿನ ಆತ್ಮಪುರುಷನ ಮೂರುತಿಯನ್ನು ಒಡಮೂಡಿಸಲು ಇಲ್ಲಿ ಹವಣಿಸಿದೆ.

ಈ ಗ್ರಂಥವು ಬರಿ ಎತ್ತಿದ ಆರತಿಯೆನ್ನಬಹುದು. ಕರ್ನಾಟಕದಲ್ಲಿಯ ಪ್ರತಿಯೊಂದು ಹಳ್ಳಿಯ ಹಾಗು ಪಟ್ಟಣದ ಚಾರಿತ್ರ್ಯ, ವೈಶಿಷ್ಟ್ಯ, ಮಹತಿಗಳನ್ನು ಕುರಿತು ಸಾಹಿತ್ಯವು ನುಡಿದಾಗ ಮಂಗಲಪೂಜೆಯ ವಿಧಾನವು ಜರುಗೀತು. ಇಂಥ ಕಾರ್ಯವನ್ನು ಕೈಕೊಂಡು ಪ್ರಬಂಧದ ಒಂದು ವಿಶಿಷ್ಟ ಪ್ರಕಾರವನ್ನು ಬೆಳೆಸಲು ತರುಣ ಲೇಖಕರನ್ನು ಈ ಮೂಲಕ ಬಿನ್ನವಿಸುತ್ತೇನೆ.

ವಿ. ಕೃ. ಗೋಕಾಕ

——

# ಕನ್ನಡಾಂಬೆ

(ಚಿತ್ರಪರಿಚಯ)

**ಚಿತ್ರಶಿಲ್ಪಿ :— ಶ್ರೀ. ಬೆಳಗಾವಿ ರಾಮಚಂದ್ರರಾಯರು**

ಇದು ಕರ್ನಾಟಕಾಂಬೆಯ ಭಾವಚಿತ್ರ. ಸಕೃದ್ದರ್ಶನಕ್ಕೆ ಒಬ್ಬ ದೇವಿ ಪತಾಕೆಯನ್ನು ಹಿಡಿದುಕೊಂಡು, ಬಲಗೈಯೂರಿ, ಪೂರ್ವಾಭಿಮುಖಿಯಾಗಿ ಕುಳಿತಿರುವಂತೆ ತೋರುವದು.

ಆದರೆ ಇಲ್ಲಿ ಗಮನಿಸಬೇಕಾದ ಕೆಲ ಅಂಶಗಳಿವೆ. ಭಾರತಮಾತೆಯನ್ನು ಭರತಖಂಡದ ನಕ್ಷೆಯ ಗೆರೆಗಳಲ್ಲಿ ಚಿತ್ರಿಸಿದಂತೆ ಈ ಚಿತ್ರವನ್ನು ಕರ್ನಾಟಕದ ನಕ್ಷೆಯ ಗೆರೆಗಳಲ್ಲಿ ಬರೆದಿದೆ.

ನಕ್ಷೆಯೊಂದನ್ನು ಹತ್ತಿರ ಇಟ್ಟುಕೊಂಡು ನೋಡಿದರೆ, ದೇವಿಯ ಮುಖವು **ಧಾರವಾಡಜಿಲ್ಲೆ**ಯ ಮೇರೆಯ ಗೆರೆಗಳಿಗೆ ಅನ್ವಯಿಸುವದು ಕಂಡುಬರುವದು. ಮುಕುಟದ ನವಿಲುಗರಿಗಳ ಕೆಳಗಿನ ಗೆರೆಗಳನ್ನು ಹಿಡಿದುಕೊಂಡು ಕೆಳಕ್ಕಿಳಿದು, ಕಿವಿಯನ್ನು ಹೊರಕ್ಕೆ ಬಿಟ್ಟು, ಗಲ್ಲದ ಮೇಲಿನ ಕೂದಲಿನ ಹೊರಗೆರೆಯನ್ನು ಹಿಡಿದು ಕೆಳಗೆ ಸಾಗಿ, ಮುತ್ತಿನ ಸರದ ಗೆರೆಯೊಂದಿಗೆ–ಸೀರೆಯ ಅಂಚಿನ ಗೆರೆಯೊಂದಿಗೆ ಎಡ ಗಲ್ಲದ ಬದಿಯ ಕೂದಲ ಜೊಂಪಿಗೆ ಬಂದು, ಹಣೆಯ ಹತ್ತಿರದ ಕುರುಳುಗಳ ಸೀಮಾ ರೇಷೆಯನ್ನು ಹಿಡಿದು ಮೇಲಕ್ಕೆ ಬಂದು, ಕಿರೀಟದ ಎಡಮುದಿಯನ್ನು ಮುಟ್ಟಿದರೆ ಧಾರವಾಡ ಜಿಲ್ಲೆಯ ಮೇರೆಯನ್ನು ಸುತ್ತುವರಿದಂತಾಗುವದು.

ಧಾರವಾಡ ಜಿಲ್ಲೆಯ ದಕ್ಷಿಣದ ಮೇರೆಯೊಡನೆ ಹೊಂದುವ ಸೀರೆಯ ಅಂಚು, ಧ್ವಜದಂಡದ ಮೇಲಿನ ನಕ್ಷತ್ರ, ಧ್ವಜದ ಕೆಳಗೆರೆ ಇವುಗಳನ್ನೆಲ್ಲ ಕೂಡಿಸಿ ನೋಡಿದರೆ, **ತುಂಗಭದ್ರಾನದಿ**ಯನ್ನು ನೋಟಕರು ಗುರುತಿಸದಿರಲಾರರು.

ಧ್ವಜದಂಡದ ಮೇಲಣ ನಕ್ಷತ್ರವೇ **ಹಂಪೆ.** ಧ್ವಜದಂಡದ ಕೆಳಮುದಿಯೇ ಶ್ರೀರಂಗಪಟ್ಟಣದ ಧರ್ಮಸ್ಥಾನ. ಧ್ವಜವಸ್ತ್ರದಿಂದ ಆವೃತ

ವಾದ ಭಾಗವು ವಿಜಾಪುರ, ಹೈದ್ರಾಬಾದು ಕಡೆಯ **ಬಯಲುಸೀಮೆ.** ಧ್ವಜದ ಮೇಲೆ ಅಂಕಿತವಾದ ಜೋಳದ ಪೈರು ಬಯಲುಸೀಮೆಯ ಫಲವಂತಿಕೆಯನ್ನು ಸೂಚಿಸುವದು. ಹಕ್ಕಿಗಳ ಸಾಲು ಕಾಳುಗಳನ್ನು ತಿನ್ನಲಿಕ್ಕೆ ಬರುತ್ತಿದೆ. ಕರ್ನಾಟಕದ ಸಮೃದ್ಧಿಯು ಬೌದ್ಧ, ಜೈನ, ಶೈವ, ಶಾಕ್ತ, ಶ್ರೀವೈಷ್ಣವ ಪ್ರಮುಖ ಮತಗಳನ್ನೂ, ರಾಜ–ರಾಜೇಶ್ವರರನ್ನೂ ಕ್ರಿಸ್ತಪೂರ್ವ ೨-೩ ಶತಮಾನಗಳಿಂದ ಆಕರ್ಷಿಸಿದುದು ಸರ್ವಶ್ರುತವಿದೆ.

ಕಿವಿಯೂ, ಗಲ್ಲವನ್ನು ಮುಟ್ಟಿ ಬಲಹೆಗಲ ಮೇಲೆ ಬಿದ್ದ ಕೇಶಭಾಗವೂ ಕೂಡಿ **ಕಾರವಾರಜಿಲ್ಲೆ.**

ಕಿರೀಟದಲ್ಲಿ **ಬೆಳಗಾಂವಿಜಿಲ್ಲೆ,** ಪ್ರಭಾವಲಯದಲ್ಲಿ ಗಡಿನಾಡು ಬರುತ್ತಿವೆ. ವಕ್ಷಃಸ್ಥಲ, ಬಲಗೈ, ಪಾದ ಮೊದಲ್ಗೊಂಡು ದೇವಿಯ ಉಳಿದ ದೇಹದ ಭಾಗವೆಲ್ಲಾ **ಮೈಸೂರು ಸೀಮೆ.**

ಎಲ್ಲ ಸೀಮಾರೇಷೆಗಳು ನಕ್ಷೆಯಲ್ಲಿ ಚಾಚೂ ತಪ್ಪದೆ ಹೊಂದುತ್ತಿವೆಯೆಂತಲ್ಲ. ಬಲಗೈಯೂರಿದ ಭಾಗವು ಪಡುವ ಕಡಲನ್ನು ಅತಿಕ್ರಮಿಸಿದೆ. ಹಿಂದೆ ಪರಕೀಯರು ಕರ್ನಾಟಕವನ್ನು ಆಕ್ರಮಿಸಿದರು; ಇಂದು ಕರ್ನಾಟಕವು ತನ್ನದಲ್ಲದ ಭಾಗವನ್ನು ಆಕ್ರಮಿಸುತ್ತಿರಬಹುದು.

ಪಡುವಲ ಗಾಳಿ ಬೀಸುತ್ತಿದೆ. ಕೂದಲು ಗಲ್ಲದ ಮೇಲೆ ಹಾರುತ್ತ ಎಡಕ್ಕೆ ಗಾಳಿಯಲ್ಲಿ ಅಲೆಯುತ್ತಿವೆ. ಹಣೆಯ ಮೇಲಣ ಉದ್ದ ಕುಂಕುಮ, ಕೆಳಗಿನ ಹಚ್ಚೆ ಪಂತಿಯಲ್ಲಿನ ದೀಪಶಿಖೆಯಂತೆ ತೋರುತ್ತಿದೆ.

ಕನ್ನಡಿಗರ ತಾಯಿ ಮೂಡಲ ಕೆಂಪನ್ನು ನಿಟ್ಟಿಸುತ್ತ ನಾಡಗುಡಿಯನ್ನು ಹಿಡಿದುಕೊಂಡು ಎದ್ದೇಳುವುದರಲ್ಲಿದಾಳೆ.

---

**ಸಮರ್ಪಣ:—**

ಏಕೀಕೃತ ಕರ್ನಾಟಕದ

ಆತ್ಮಪುರುಷನ

ಅಲರಡಿಯಲ್ಲಿ

# ಪರಿವಿಡಿ

## ಉತ್ತರ ಕರ್ನಾಟಕ



## ಮದ್ರಾಸ ಕರ್ನಾಟಕ



## ಮೈಸೂರ ಕರ್ನಾಟಕ



## ನಿಝಾಮ ಕರ್ನಾಟಕ



## ಕೊಡಗು–ಕನ್ನಡ

# ಧಾರವಾಡ

ವ್ಯಕ್ತಿಗಳಿಗೆ ದೈವಬಲವಿದ್ದಂತೆ ದೇಶಗಳಿಗೂ ದೈವಬಲವಿರುತ್ತದೆ, ಪಟ್ಟಣಗಳಿಗೂ ಇರುತ್ತದೆ. ವ್ಯಕ್ತಿಗಳಿಗೆ ಪೌರುಷವಿದ್ದಂತೆ ಪಟ್ಟಣಗಳಿಗೂ ಕ್ರಿಯಾಶಕ್ತಿಯಿರುತ್ತದೆ. ಇತಿಹಾಸದ ನಕಾಶವು ಕ್ಷಣಕ್ಷಣಕ್ಕೆ ಬದಲಾಯಿಸುತ್ತಿರುತ್ತದೆ. ಇಂದಿನ ಯುರೋಪಖಂಡದ ನಕಾಶದಂತೆ ಕಾಲವೆಂಬ ಮಹಾ ಸಮುದ್ರದಲ್ಲಿ ತೆರೆಗಳಂತೆ ಪಟ್ಟಣಗಳು ಬೀಳುತ್ತವೆ, ಏಳುತ್ತವೆ. ಹಾಳಾದ ಸಂಸ್ಕೃತಿಯನ್ನು ಅಭ್ಯಸಿಸಿ ಅದರ ಚಿತ್ರವನ್ನು ಕಣ್ಣಿಗೆ ಕಟ್ಟುವಂತೆ ರೇಖಿಸಿ ತೋರಿಸಲು ಸಾಹಸಪಡುವ ಸಂಶೋಧಕರನ್ನು ಸಮುದ್ರದ ಬುರುಗಿನಲ್ಲಿ ಬೆಣ್ಣೆ ಕಡೆಯುಬಹುದಾದ ಗೋಪಿಯರಿಗೆ ಹೋಲಿಸಬಹುದು.

ಇಂದಿನ ಕರ್ನಾಟಕದಲ್ಲಿ ನವೀನ ಸಂಸ್ಕೃತಿಯು ತಲೆದೋರಹತ್ತಿದೆ. ಕೆಲವೊಂದು ಪಟ್ಟಣಗಳಲ್ಲಿ ಈ ಸಂಸ್ಕೃತಿಯು ತನ್ನ ಕೋಟೆಗಳನ್ನು ನಿರ್ಮಿಸಿಕೊಂಡು ನಾಡಿನಲ್ಲೆಲ್ಲ ಹಬ್ಬುತ್ತಿದೆ; ತನ್ನ ವ್ಯಾಜನೋ ತಂತ್ರವನ್ನು ಹಬ್ಬಿಸಲು ಪ್ರಯತ್ನಿಸುತ್ತಿದೆ. ಇಂಥ ಕೋಟೆ ಕೊತ್ತಳಗಳಲ್ಲಿ ಧಾರವಾಡವು ಒಂದು.

ಕೋಪಣ ನಗರ, ಪುಲಿಗೆರೆ, ಒಕ್ಕುಂದ, ಕಿಸುವೊಳಲ್ ಮೊದಲಾದ ತಿರುಳುಗನ್ನಡದ ಕೋಟೆಗಳು ಮೆರೆದ ಕಾಲವೇ ಬೇರೆ; ಇಂದಿನ ಕಾಲವೇ ಬೇರೆ. ಆಗ ಧಾರವಾಡವು ಏನಿತ್ತೋ ಮೇಲೆ ಹೇಳಿದ ಸಂಶೋಧಕರಿಗೆ ಗೊತ್ತು. ಇದೊಂದು ಮಾತು ಮಾತ್ರ ನಿಜ; ಧಾರವಾಡವೆಂಬ ನಗರವು ಆಗ ಇನ್ನೂ ಕಾಲಪುರುಷನ ರತ್ನಭಾಂಡಾರದಲ್ಲಿ ಗೌಪ್ಯವಾದ ಪುಣ್ಯನಿಧಿಯಾಗಿತ್ತು; ಪುಲಿಗೆರೆಯು ಮಹಾಸೀಮೆಯಲ್ಲಿ ಒಂದು ರೇಖೆಯಾಗಿತ್ತು.

ಕದಂಬರು ಆಳಿಹೋದರು; ರಾಷ್ಟ್ರಕೂಟರು ಬಂದರು; ಚಾಲುಕ್ಯರು ಕಾಲಿಟ್ಟರು. ಬನವಸೆ, ಕೋಪಣ ನಗರ, ಬದಾಮಿ, ಕಲ್ಯಾಣ ಮೊದಲಾದ ಪಟ್ಟಣಗಳು ರಾಜಧಾನಿಗಳಾಗಿ ಮೆರೆದು ತಲೆಕೆಳಗಾದುವು. ವಿದ್ಯಾರಣ್ಯರ

ವಿಜಯನಗರವು ಹಂಪೆ ಕೊಂಪೆಯಾಯಿತು. ಹೀಗೆ ಅನೇಕ ಕ್ರಾಂತಿ ಯುಗಗಳು ಕಳೆದುಹೋದರೂ ರಾಜವಂಶಗಳು ಅಳಿದುಹೋದರೂ ಧಾರವಾಡವು ಕದಲದಿತ್ತು ; ' ಬರುವುದೇನುಂಟೋ ಮ್ಮೆ ಬರುವ ಕಾಲಕ್ಕೆ ಬಹುದು ' ಎಂದು ಬಯಕೆಯ ಕಣ್ಣನ್ನೆಗೆಯ್ಯುತ್ತ ಕಾಲದ ಮಡಲಲ್ಲಿ ಮಡಗಿತ್ತು.

ಮುಂದೆ ಪೇಶ್ವೆಯವರು ಬಂದರು ; ಸವಣೂರ ನವಾಬರು ಧಾರವಾಡದಲ್ಲಿ ಮನೆ ಮಾಡಿದರು. ಕನ್ನಡದ ವಿಶಾಲಪ್ರದೇಶದಲ್ಲಿ ಅಜ್ಞಾತ ಅಂಗುಲಿಯಾದ ಧಾರವಾಡವು ಪೇಶ್ವೆಯರ ಸಂಸ್ಕೃತಿಯ ದಕ್ಷಿಣ ಕ್ಷೇತ್ರವಾಯಿತು. ತನ್ನ ಕನ್ನಡತೆಯನ್ನು ಗತಪ್ರಾಣವಾಗಿ ಮಾಡಿಕೊಳ್ಳುವ ಹೊತ್ತನ್ನು ತಂದುಕೊಂಡಿತು. ಆದರೆ ಕನ್ನಡವು ಮತ್ತೆ ತಲೆಯೆತ್ತಲು ಧಾರವಾಡವೂ ತಲೆಯೆತ್ತಿತು. ಕನ್ನಡ ಕಾವ್ಯ ನಾಟಕಗಳಲ್ಲಿ ' ಧಾರಾನಗರ 'ವಾಗಿ ' ತಂತುಪುರಿ ' ಯಾಗಿ ' ಟುಕು ಟುಕು ' ಎಂದೇ ಆಗಲಿ—ಬದುಕಿಕೊಂಡಿತು. ಇಂದಿಗೆ ಉತ್ತರ ಕರ್ನಾಟಕದಲ್ಲಿ ಧಾರವಾಡವು ಹೊಸ ಸಂಸ್ಕೃತಿಯ ಮೊದಲನೆಯ ಕೋಟೆಯಾಗಿ ನಿಂತಿದೆ ! ' ವಿದ್ಯಾವರ್ಧಕ ಸಂಘ 'ದ ಪುರಸ್ಕರ್ತರು ಕನ್ನಡದ ಬಾವುಟವನ್ನು ಎತ್ತಿ ನಿಲ್ಲಿಸಿದರು. ರಾಜಕಾರಣಪಟುಗಳು ರಾಷ್ಟ್ರೀಯತೆಯ ಮಂತ್ರವನ್ನು ಇಲ್ಲಿಯೇ ಪಠಿಸಿದರು. ಶಾಲೆಗಳಾದವು. ಬೇರೆ ಬೇರೆ ಸಂಸ್ಥೆಗಳು ಹುಟ್ಟಿದವು. ರೊದ್ದರಾಯರ ಹಾಗೂ ಶ್ರೀ ಅರಟಾಳ ರುದ್ರಗೌಡರ ಸತತ ಪ್ರಯತ್ನದಿಂದ ಧಾರವಾಡವು ಕಾಲೇಜನ್ನು ಕಂಡಿತು. ಇದಕ್ಕೂ ಮೊದಲು ಟ್ರೇನಿಂಗ್ ಕಾಲೇಜಂತೂ ಇತ್ತೇ ಇತ್ತು. ಅನೇಕ ವರುಷಗಳವರೆಗೆ ಮದ್ರಾಸಿನ ಜೊತೆಗೆ ಧಾರವಾಡವೇ ರೇಲ್ವೆಯ ತವರೂರಾಗಿತ್ತು.

ಜಿಲ್ಲೆಯ ಕೇಂದ್ರವಾದ ಧಾರವಾಡಕ್ಕೆ ಎಲ್ಲ ಕಡೆಯಿಂದ ಜನರು ಬರತೊಡಗಿದರು. ಬಂದವರಲ್ಲಿ ರಸಿಕರಾದವರು ನಗರದ ನಿಸರ್ಗ ಸೌಂದರ್ಯಕ್ಕೆ ಮನಸೋತುಬಿಟ್ಟರು. ಹತ್ತಿಕೊಳ್ಳದಲ್ಲಿಯ ಅಗಾಧ ಪ್ರಕೃತಿದರ್ಶನ, ಶಾಲ್ಮಲೆಯ ಉಗಮದ ಮೇಲೆ ನಿಂತ ಸೋಮೇಶ್ವರನ ಶೀತಲಾಶ್ರಯ, ಸಪ್ತಾಪುರದ ಮಾರುತಿ, ಸಾಧನಕೇರಿಯ ಹಚ್ಚಹಸಿರು, ಕೆಲಗೇರಿಯ ಕೆರೆ—ಹೀಗೆ ದಿಕ್ಕುದಿಕ್ಕಿಗೆ ಚೆಲುವು ಉಕ್ಕಿನಿಂತಾಗ, ಮಲೆನಾಡಿನ

ಸೆರಗಿನ ಕಸೂತಿಯೆಲ್ಲ ಇಲ್ಲಿ ಅರಳಿರುವಾಗ, ಧಾರವಾಡವು ವಾಮನನಂತೆ ಬೆಳೆದಿದ್ದರಲ್ಲಿ ಏನಾಶ್ಚರ್ಯ? ಮಾಳಮಡ್ಡಿಯಲ್ಲಿ ಸೊಗಸಿನ ಮನೆಗಳಾದವು. ಬೆಡಗಿನ ಬೀಡಾಯಿತು; ಶ್ರೀಮಂತ ರಡ್ಡೀ ಸಮಾಜದ ಬಂಗಲೆಗಳಾದವು; ಗೋಪಾಳಪುರವಾಯಿತು. ಧಾರವಾಡದ ಸುತ್ತಲಿದ್ದ ಗುಡ್ಡ–ದಿನ್ನೆಗಳೆಲ್ಲ ದೀಪಾವಳಿಯ ದಿಬ್ಬಗಳಾದವು. ಪಾತಾಳದಷ್ಟು ಆಳವಾದ ಬಾವಿಗಳಿಂದ ಗಿಂಡಿಯಷ್ಟು ನೀರು ಹೊರಡಲೊಲ್ಲದೇಕೆ, ನಗರ ಸಭೆಯ ದುರ್ಲಕ್ಷವು ರಾಶಿರಾಶಿಯಾಗಿ ಬಿದ್ದಿರಲೊಲ್ಲದೇಕೆ, ಧಾರವಾಡವನ್ನು ಜನರು ಬಿಡದಾದರು. ಜಿಲ್ಲೆಯಲ್ಲಿಯ ಗೌಡ ದೇಸಾಯಿ ದೇಶಪಾಂಡೆಯರೆಲ್ಲ ಇಲ್ಲಿ ಬಂದು ಮನೆ ಮಾಡಿದರು. ಅಧಿಕಾರದಿಂದ ನಿವೃತ್ತರಾದ ಅಧಿಕಾರಿಗಳು ಇಲ್ಲಿ ತಮ್ಮ ವಿರಾಮಗೃಹಗಳನ್ನು ಕಟ್ಟಿದರು. ಮುಗದದ ತಾವರೆ ಕೊಳಗಳಿಗೆ ಗುಂಪು ಕಟ್ಟಿಕೊಂಡು ಹೋಗಿ ಕಮಲಗಳನ್ನು ತರುವ ಸಾಹಸವು ಕಣ್ಣೆದುರಿಗಿರುವಾಗ ಕಿರಿಯರಿಗೆಲ್ಲ ಸಹ ಧಾರವಾಡವು ಸುಖಮಯವಾಗಿ ಪರಿಣಮಿಸದೆ ಏನು?

ಉತ್ತರ ಕರ್ನಾಟಕದ ಸಾರ್ವಜನಿಕ ಜೀವನದಲ್ಲಿ ಧಾರವಾಡವೇ ಕ್ರಾಂತಿಯನ್ನು ಹೂಡಿತು. ದೊಡ್ಡರಾಯರು ಟ್ರೇನಿಂಗ್ ಕಾಲೇಜದ ಪ್ರಿನ್ಸಿಪಾಲರಾಗಿದ್ದಾಗ ಸಂಭವಿಸಿದ ಕೆಲವು ವಿದ್ಯಾವಿನೋದಗಳು ಈಗ ಸಕಲರ ಸೊತ್ತಾಗಿವೆ. ಭಾವೀ 'ಕೊಬ್ಬಾಚಾರ್ಯ'ರನ್ನು ಶೋಧಿಸಲು ಒಮ್ಮೆ ಅವರು 'ಉಂಡಿ ಪರೀಕ್ಷೆ'ಯನ್ನು ಹೂಡಿದರಂತೆ! ಎಲ್ಲರಿಗಿಂತ ಹೆಚ್ಚು ಉಂಡಿಗಳನ್ನು ತಿಂದವರಿಗೆ ಆ ಪರೀಕ್ಷೆಯಲ್ಲಿ ಒಂದನೇ ನಂಬರು! ಆ ಸಮೃದ್ಧಿ ಕಾಲವನ್ನು ನಾವೀಗ ಟೀಕಿಸಬೇಕಾಗಿಲ್ಲ; ನೋಡಿ ಕೌತುಕ ಪಡಬೇಕಾಗಿದೆ. 'ಕ್ಲಬ್ಬು' ಜೀವನದ ರೂಪ–ರೇಷೆಗಳು ಬೇಕೆ? ಮಿತ್ರ ಸಮಾಜ, ಕಾಃಸಮಾಃಸ್—ಎಂಬ ವಿಶ್ರಾಮ ಧಾಮಗಳಿವೆ. 'ಐತಿಹಾಸಿಕ ಸಂಶೋಧನವಿದೆ' 'ವನಿತಾ ಸಮಾಜವಿದೆ'. 'ಗೋಳೀಬಾರಿ'ನ ಪ್ರಸಂಗವು ಧಾರವಾಡದಲ್ಲಿ ಜರುಗಿದಾಗ ಇಡೀ ಹಿಂದುಸ್ತಾನದ ಕಣ್ಣೇ ಅತ್ತಕಡೆಗೆ ತಿರುಗಿದವು. ಅಂದು ಜನತೆಯ ಮನಸ್ಸನ್ನು ಹಿಡಿದ ಮಹನೀಯರನೇಕರು ಇಂದಿಗೂ ದೇಶಸೇವೆಯಲ್ಲಿ ದೇಹವನ್ನು ಸವೆಸುತ್ತಿದ್ದಾರೆ. ಕನ್ನಡ–ಮರಾಠೀ ವಾದವು ಹುಟ್ಟಿ ಹಿಮ್ಮೆಟ್ಟಿದ್ದು ಧಾರವಾಡದಲ್ಲಿ, ಎಡ್‌ವರ್ಡ್ ಪಾರ್ಕಿನಲ್ಲಿ. ಧಾರವಾಡ ಬಾರ್‌ರೂಮಿನಲ್ಲಿ ಕುಳಿತೇ ಕಡಪಾರಾಯರು ಏಕೀಕರಣ

ಮಂತ್ರವನ್ನು ಜಪಿಸಿದರು. ಇಂದಿನ ಕನ್ನಡ ಕಾವ್ಯವು ಈ ಕಡೆಗೆ ಮೊದಲು ಮೊಳಗಿದ್ದು ಕರ್ನಾಟಕ ಕಾಲೇಜಿನಲ್ಲಿ; ನಾಡಹಬ್ಬದ ಉತ್ಸವ ಪ್ರಸಂಗದಲ್ಲಿ. 'ಗುಂಪಿ'ನ ಸಾಹಿತ್ಯ ನಿರ್ಮಾಣಕ್ಕೆ ಧಾರವಾಡವೇ ಕೇಂದ್ರ ವಾಯಿತು. ಶಾಂತ ಕವಿಗಳು 'ರಕ್ಷಿಸು ಕರ್ನಾಟಕ ದೇವಿ' ಎಂದು ಹಾಡಿ ಹರಿಸಿದ್ದು ಧಾರವಾಡದ ಬೀದಿಗಳಲ್ಲಿ. ಕಾವ್ಯಾನಂದರು ತಮ್ಮ ಕಟ್ಟಕಡೆಯ ವಿನೋದಗಳಿಂದ ಜನರನ್ನು ಸಂತೋಷಪಡಿಸಿದ್ದು ಧಾರವಾಡದಲ್ಲಿಯ ತಮ್ಮ ಮನೆಯಲ್ಲಿ ಅಖಿಲ ಕರ್ನಾಟಕದ ನಾಟಕ ಪರಿಷತ್ತನ್ನು ದಿವಂಗತ ಶ್ರೀ ಸಾಸನೂರವರು ಇಲ್ಲಿಯೇ ಸೇರಿಸಿ ಮೊದಲನೆಯ ಅಧಿವೇಶನವನ್ನು ನೆರವೇರಿಸಿ ದರು. ಆಮೇಲೆ ಧಾರವಾಡವು ಶ್ರೀರಂಗರ ನಾಟಕಗಳ ರಂಗಸ್ಥಲವಾಯಿತು. ಈಗ ಕರ್ನಾಟಕ ಸಂಸ್ಕೃತಿ ಸಂಶೋಧನ ಸಂಸ್ಥೆಯು ಇಲ್ಲಿಯೇ ತಳವೂರಿದೆ. ಒಂದಲ್ಲ, ಎರಡಲ್ಲ, ಅನೇಕ ಕಾರ್ಯಗಳನ್ನು ಸಫಲವಾಗಿಸಿ ಉತ್ತರ ಕರ್ನಾಟಕದ ಕೀರ್ತಿಮುಖವಾಗಿ ಧಾರವಾಡವು ಮೆರೆಯುತ್ತಲಿದೆ.

ಇತ್ತೀಚೆಗೆ, ಧಾರವಾಡದ ಭವಿತವ್ಯತೆಯನ್ನು ಕುರಿತು ಅನೇಕ ಅಪಸ್ವರಗಳು ಕೇಳಬರುತ್ತಿವೆ. ಇದರಲ್ಲಿ ಸತ್ಯಾಂಶವೂ ಇದೆ. ಧಾರವಾಡದಲ್ಲಿ ಸಾರ್ವಜನಿಕ ಜೀವನವು ಅಷ್ಟೊಂದಾಗಿ ಬೆಳೆದಿಲ್ಲವಂತೆ. ಪರಸ್ಪರ ನಂಬುಗೆ ಯಿಲ್ಲದ ಇಲ್ಲಿಯ ಸಂಶಯಮಯ ವಾತಾವರಣದಲ್ಲಿ ಸಂಸ್ಥೆಗಳು ಬೆಳೆಯಲು ಅವಕಾಶವಿಲ್ಲವಂತೆ. ವರ್ಷಕ್ಕೊಂದು ಶಾಲೆ ಹುಟ್ಟಿ ಸಾಯುತ್ತವೆ. ಪತ್ರಿಕಾ ವಾಂಗ್ಮಯದ ಜನನ–ಮರಣದ ಲೆಕ್ಕವು ಚಿತ್ರಗುಪ್ತರನ್ನು ದಿಗಿಲುಗೊಳಿಸ ಬಹುದು. ವ್ಹಿಕ್ಟೋರಿಯಾ ಕಾಲೇಜು ಮುರಿದು ಕರ್ನಾಟಕಕ್ಕೆ ಅಪಾರವಾದ ನಷ್ಟವೊದಗಿತು. ಧಾರವಾಡದ ನಾಗರಿಕರು ಅದನ್ನು ಉಳಿಸಿಕೊಳ್ಳಲಿಲ್ಲ ವೇಕೆ? ರ‍್ಯಾಂಗಲರ ಕಟ್ಟಿಯವರು ಮನೆ ಮನೆ ತಿರುಗಿದಾಗ ಅವರಿಗೆ ಹಣ, ಕಾಸು ಹೊರಡಬಾರದೆಂದರೇನು? ಅಸೂಯೆ, ಅಪನಂಬಿಕೆ, ದ್ವೇಷ, ದೂಷಣೆ, ಬೆಲ್ಟಿನ ಕೆಳಗೆ ಹೊಡೆದಾಡುವಿಕೆ, ಬೆಲ್ಟಿನ ಮೇಲೆ ಉಗುಳುವಿಕೆ— ಇವುಗಳಿಂದ ಧಾರವಾಡದ ಜೀವನಸಮುದ್ರದಲ್ಲಿ ವಿಷವೆದ್ದಿದೆಯಂತೆ. ಇಂಥ ಪಟ್ಟಣವು ಮುಂಬೈ ಕರ್ನಾಟಕದ ರಾಜಧಾನಿಯಾಗುವದು ಹೇಗೆ? ಧಾರವಾಡದ ದೈವವೇನಿರುವದೋ ನಾವಿನ್ನೂ ಕಾಣೆವು. ಧಾರವಾಡದಲ್ಲಿ ಪೌರುಷವಿದೆಯೆಂಬುದನ್ನು ಯಾರೂ ಅಲ್ಲಗಳೆಯಲಾರರು. ಧಾರವಾಡವು

ಹುಬ್ಬಳ್ಳಿಯ ರಸ್ತೆಯುಗುಂಟ ಹಬ್ಬಬೇಕು. ಹುಬ್ಬಳ್ಳಿಯು ಧಾರವಾಡದ ರಸ್ತೆಯುಗುಂಟ ಹಬ್ಬಬೇಕು. ಎರಡೂ ನಗರಗಳು ಕೂಡಿ ಒಂದು ಮಹಾ ನಗರವಾಗಬೇಕು. ಹೀಗೆ ಧಾರವಾಡ–ಹುಬ್ಬಳ್ಳಿ ನಗರವು ಉತ್ತರ ಕರ್ನಾಟಕದ ಬಳ್ಳಿಗೆ ಬಿಟ್ಟ ಹೂವಾಗಬೇಕು. ಉತ್ತರದ ಬೆಂಗಳೂರಾಗ ಬೇಕು. ಹುಬ್ಬಳ್ಳಿಯ ಭಾಗವು ಉದ್ಯೋಗದ ಕೇಂದ್ರ. ಧಾರವಾಡ ಭಾಗವು ಸಂಸ್ಕೃತಿಯ ಕೇಂದ್ರ. ಇಂಥ ಎರಡು ಭಾಗಗಳನ್ನೊಳಗೊಂಡು ಮಹಾನಗರವು ಮುಂಬೈ ಕರ್ನಾಟಕದ ಮುಖ್ಯ ಪಟ್ಟಣವಾಗಬೇಕು. ಇದೊಂದು ನಾವು ಕಾಣುತ್ತಿರುವ ಕನಸು. ಇದೇನು ಮನಸ್ಸಿನ ಮಂಡಿಗೆಯೋ ಕಾಳಸು ಹಿಡಿದ ದಂಡಿಗೆಯೋ, ದೈವವು ಹಿಂಜಿಟ್ಟ ಅರಳೆಯ ಅಂಡಿಗೆಯೋ ಏನನ್ನೂ ಹೇಳಲು ಬರುವದಿಲ್ಲ. ಇದೊಂದು ಕನಕನ ಮುಂಡಿಗೆಯೆಂದು ಮಾತ್ರ ನಾವು ಸಮಾರೋಪಣೆ ಮಾಡಬಹುದು. ಆಗುಹೋಗುಗಳ ಮೇಲೆ ನಮ್ಮ ಆಧಿಪತ್ಯವಿಲ್ಲ. ಆದರೆ ಧಾರವಾಡವನ್ನು ಮರೆಯುವದೆಂತು? ಕೋಟಿ ಯೋಜನಗಳಷ್ಟು ದೂರ ದಾಟಿ ಹೋದರೂ ಕ್ಯಾರಕೊಪ್ಪದಿಂದ ಧಾರವಾಡದ ನಿಲ್ಮನೆಗೆ ಗಾಡಿಯೋಡುವಾಗ ಕಂಗೊಳಿಸುವ ಕಾಲೇಜು ನಿರಂತರವಾಗಿ ಕಣ್ಣುಕಟ್ಟುವದು. ಸಾಧನಕೇರಿಯ ಹಚ್ಚಹಸಿರೂ ಪಾತರ ಗಿತ್ತಿ ಪಕ್ಕದಲ್ಲಿ ಅಂಬಿಕಾತನಯದತ್ತರು ವರ್ಣಿಸಿದ ನೂರೆಂಟು ಹೂಗಳೂ ಒಂದೇಸವನೆ ಕುಣಿದು ಕರೆಯುವವು. ಶಾಲ್ಮಲೆಯ ಸೋಮೇಶ್ವರನು ಸನ್ನಿಧಾನದ ಸೌಂದರ್ಯವನ್ನು ತೋರಿಸಿ ಆಶೆಹಚ್ಚುವನು. ಸಪ್ತಾಪುರದ ರಾಜಮಾರ್ಗಗಳು ಸಪ್ತಸಮುದ್ರಗಳಾಚೆ ಗೋಚರವಾಗುವವು. ಮುಂಬೈ ಕರ್ನಾಟಕವು ಧಾರವಾಡದ ಯೋಗ್ಯತೆಯನ್ನರಿತು ತಕ್ಕಂತೆ ಮರ್ಯಾದಿಸು ವದೋ ಇಲ್ಲೋ ನಾನು ಹೇಳಲಾರೆ. ಆದರೆ ನನ್ನ ದೃಷ್ಟಿಯಲ್ಲಿ ಧಾರವಾಡವು ವಿಾಸಲಿಟ್ಟ ನಾಡು; ಸಕಲ ಸೌಭಾಗ್ಯದ ಬೀಡು. ಮಾರ್ಸೈ ಬಂದರ ನಗರವು ಫ್ರಾನ್ಸ ದೇಶದ ದಕ್ಷಿಣದ ರಾಜಧಾನಿಯಾಗಿದೆ. ಇದು ಪ್ಯಾರಿಸ್ ಪಟ್ಟಣಕ್ಕಿಂತ ಪುರಾತನವಾದುದು. ಆದರೆ ದೈವದೋಟದಲ್ಲಿ ಮಾರ್ಸೈ ನಗರವು ಹಿಂದೆಬಿದ್ದಿತು. ಪ್ಯಾರಿಸ್ ಇಡೀ ದೇಶದ ರಾಜಧಾನಿಯಾಯಿತು. ಅಂದಿನಿಂದ ಪ್ಯಾರಿಸ್ ನಿವಾಸಿಗಳಿಗೂ ಮಾರ್ಸೈದವರಿಗೂ ಒಂದುಬಗೆಯ ಈರ್ಷೆ ಬಿದ್ದ ಹಾಗಾಗಿದೆ. ಪ್ಯಾರಿಸ್‌ದಿಂದ ಬಂದ ಪ್ರೇಕ್ಷಕನು ಮಾರ್ಸೈ

ಪಟ್ಟಣವನ್ನು ಗೇಲಿಮಾಡಿ ಮಾತನಾಡಿದರೆ ಮಾರ್ಸ್ಲೈ ನಿವಾಸಿಯು ಸಿಟ್ಟು ಬೆಂಕಿಯಾಗುತ್ತಾನೆ. ಮಾರ್ಸ್ಲೈದಲ್ಲಿ ಲಾಕಾರ್ನೀಚ ಎಂಬ ಪ್ರಸಿದ್ಧ ರಾಜ ಮಾರ್ಗವಿದೆ. ಎಡಬದಿಗೆ ನೀಳವಾಗಿ ಬೆಳೆದ ಮರಗಳ ತೋಪಿನಿಂದ ಅದು ಶೋಭಿಸುತ್ತದೆ. ಲಾಕಾರ್ನೀಚ ಮಾರ್ಗದ ನಟ್ಟನಡುವೆ ನಿಂತು ಪ್ಯಾರಿಸ್ ಪಟ್ಟಣದಿಂದ ಬಂದ ಪ್ರೇಕ್ಷಕನೊಬ್ಬನು ಸಮೀಪದಲ್ಲಿ ನಿಂತ ಪೋಲೀಸನನ್ನು ಕುರಿತು ಬುದ್ಧಿಪೂರ್ವಕವಾಗಿ ಲಾಕಾರ್ನೀಚ ಎಂದು ಲೋಕಪ್ರಸಿದ್ಧವಾದ ರಾಜಬೀದಿಯು ಎಲ್ಲಿದೆ ಎಂದು ಕೇಳಿದನಂತೆ. ಆಗ ರೇಗಿಗೆದ್ದ ಪೋಲೀಸನು ತನ್ನೆದುರಿಗೇ ರಸ್ತೆಯ ಮೇಲೆ ಉಗುಳಿ ಇಲ್ಲಿ ಎಂದು ಉತ್ತರ ಕೊಟ್ಟನಂತೆ!

ಧಾರವಾಡದ ದೈವ ಏನೇ ಇರಲಿ, ಪಾಮರರಿಂದ ಪಂಡಿತರ ವರೆಗೆ, ಬಿಕ್ಕೆ ಬೇಡುವವರಿಂದ ಚೊಕ್ಕಾಗಿ ಕುಳಿತು ಹರಟೆ ಕೊಚ್ಚುವವರ ವರೆಗೆ ಅದು ಪ್ರಾಣಪದಕವೆನ್ನಿಸಿಕೊಂಡಿದೆ ; ಜೀವನದ ಹಿರಿ ಹೆಮ್ಮೆಯಾಗಿದೆ.

—ಕ್ರಾಂತಿಪ್ರಿಯ

---

# ಹುಬ್ಬಳ್ಳಿ

ರೇಲ್ವೆ ದೃಷ್ಟಿಯಿಂದ ನೋಡಿದರೆ ಉತ್ತರ ಕರ್ನಾಟಕದಲ್ಲೆಲ್ಲ ಹುಬ್ಬಳ್ಳಿಯು ಬಹಳ ಮಹತ್ವದ ಪಟ್ಟಣವಾಗಿದೆ. ಸೊಲ್ಲಾಪುರ, ರಾಯಚೂರ, ಪುಣೆ, ಬೆಂಗಳೂರು—ಹೀಗೆ ಹುಬ್ಬಳ್ಳಿಯ ನಿಲ್ಮನೆಗೆ ಎರಡೇ ದಿಕ್ಕಿಲ್ಲ, ನಾಲ್ಕು ದಿಕ್ಕುಗಳಿವೆ. ಅಲ್ಲದೆ ಹುಬ್ಬಳ್ಳಿಯು ಕೂಡಲನಿಲ್ಮನೆ (Junction) ಯಷ್ಟೇಯಲ್ಲ ; ರೇಲ್ವೆಯ ಕಾರಖಾನೆಗಳಲ್ಲಿ ಒಂದರ ತವರು ಮನೆಯಾಗಿದೆ. ಶಾಃಪಿಗೆ ಹೋಗುವ ಸಾವಿರಾರು ಜನರು ಊರಲ್ಲೆಲ್ಲ ನಮ್ಮ ಕಣ್ಣಿಗೆ ಬೀಳುತ್ತಾರೆ. ಮದ್ರಾಸು, ಗುಂತಕಲ್ಲು, ಮೈಸೂರು, ಪುಣೆ, ಮುಂಬಯಿ, ದಿಲ್ಲಿ—ಹೀಗೆ ಬೇರೆ ಬೇರೆ ಕಡೆಯಿಂದ ಬಂದ ಜನರನ್ನೆಲ್ಲ ಇಲ್ಲಿ

ಒಟ್ಟುಗೂಡಿಸುವ ಸಂಸ್ಥೆಯೆಂದರೆ ಒಂದೇ ಒಂದು. ಇಲ್ಲಿಯ ವರ್ಕಶಾಪ್ ಮೊನ್ನೆ ನಾನು ಊರಿಗೆ ಹೊರಟಾಗ ಹುಬ್ಬಳ್ಳಿಯ ಸ್ಟೇಶನ್ ಮೇಲೆ ನನ್ನ ಸ್ನೇಹಿತರೊಬ್ಬರು ಭೆಟ್ಟಿಯಾದರು. ಅವರೂ ಶಾಪಿನವರು. ನಾವು ಕುಳಿತ ಡಬ್ಬಿಯಲ್ಲಿಯೇ ಇದ್ದ ಒಬ್ಬ ಅಶಿಕ್ಷಿತ ಮುದುಕನನ್ನು ಮಾತನಾಡಿಸಿ 'ಕೆಂವ್ ಸೇಟ್! ಕಿದರ ಜಾನೇಕಾ ಹೈ?' ಎಂದುಪಚರಿಸಿದರು. ಆಮೇಲೆ ನನಗೆ ಕಿವಿಮಾತಿನಲ್ಲಿ, "ನೋಡಿರಿ! ಈತ ಎಷ್ಟು ಹರುಕನಾಗಿ ಕಾಣುತ್ತಾನೆ! ಆದರೆ ಇವನ ವಿಶೇಷ ಯಾಂತ್ರಿಕ ಜ್ಞಾನಕ್ಕಾಗಿ ಕಂಪನಿ ಇವನನ್ನು ದಿಲ್ಲಿಯಿಂದ ತಂದಿದೆ. ಇವನಿಗೆ ಸಿಗುವ ಪಗಾರ ತಿಂಗಳಿಗೆ ನೂರಾಐವತ್ತು ರೂಪಾಯಿ!" ಎಂದು ಅವರು ಹೇಳಿದರು. ಇಂಥ ವಿದೇಶೀಯ ಪಕ್ಷಿಗಳೆಷ್ಟೋ ಹುಬ್ಬಳ್ಳಿಯಲ್ಲಿ ಗೂಡು ಕಟ್ಟಿಕೊಂಡಿವೆ. ಅವುಗಳಿಗೆ ಕರ್ನಾಟಕವೇನು, ಹಿಂದುಸ್ತಾನವೇನು? ಹೊಟ್ಟೆ ಬಟ್ಟೆಗೆ ಸಾಕಷ್ಟು ಕೊಡುವ ನಾಡೇ ಇಂಥವರ ದೇಶ; ನಾಲ್ಕು ಜನರೊಡನೆ ವ್ಯವಹಾರವನ್ನು ಸಾಗಿಸುವ ಸಾಮರ್ಥ್ಯವನ್ನು ಕೊಡುವ ನುಡಿಯೇ ಇವರ ಭಾಷೆ. ಇವರಿದ್ದ ಭೂಮಿಯೇ ಇವರ ತಾಯ್ನಾಡು. ವ್ಯವಹಾರವೇ ಇವರ ಜೀವನ. ಚಿಕ್ಕಂದಿನಲ್ಲಿ ಸಾಹಿತಿಗಳಾಗಿದ್ದವರು, ಮುಂದಾಳುಗಳಾಗಿದ್ದವರು, ರಾಜಕಾರಣಪಟುಗಳಾಗಿದ್ದವರು, ಆದರ್ಶವಾದಿಗಳಾಗಿದ್ದವರು, ಇನ್ನೇನೇನೋ ಗಾಳಿಗೋಪುರಗಳನ್ನು ಕಟ್ಟಿಕೊಂಡು ಹಂಬಲಿಸಿದವರು,—ಇಂಥ ಎಷ್ಟು ಜನರ ಆಕಾಂಕ್ಷೆ ನೌಕೆಗಳು ಬಿರುಗಾಳಿಗೆ ಸಿಕ್ಕು ಸಂಸಾರಸಾಗರದ ತಳವನ್ನು ಕಂಡಿಲ್ಲ! ಆದರೆ ಇಂಥವರ ದೈನಿಕ ಜೀವನಕ್ಕೆ ಶಾಪು ಆಧಾರವನ್ನು ಕಲ್ಪಿಸಿಕೊಟ್ಟಿದೆ. ಅವರ ವ್ಯವಹಾರವನ್ನು ಸಾಗಿಸಿದೆ.

ಗಳಗನಾಥರ ಕಾದಂಬರಿಗಳಲ್ಲಿ ಎಲ್ಲರೂ ಓದಿ ನೆನಪಿಟ್ಟಂತೆ—ದೈವಗತಿಯು ವಿಚಿತ್ರವಾದದ್ದು! ಹುಬ್ಬಳ್ಳಿಯು ಔದ್ಯೋಗಿಕ ಯುಗದ ಕೇಂದ್ರವಷ್ಟೇ ಅಲ್ಲ, ವ್ಯಾಪಾರದ ತಲೆವಳ್ಳಿಯೂ ಆಗಿದೆ. ಸುತ್ತುಮುತ್ತಿನ ತಾಲೂಕುಗಳಲ್ಲಿಯ ಹತ್ತಿಯೆಲ್ಲ ಇಲ್ಲಿ ಬಂದು ಬಿದ್ದು ಅರಳಿ-ಖಂಡಿಗೆಯಾಗುತ್ತದೆ; ಇದ್ದ ಒಂದೆರಡು ಗಿರಣಿಗಳಲ್ಲಿ ಅರಿವೆಯೂ ಆಗುತ್ತದೆ. ಎಲ್ಲ ಹಳ್ಳಿಗಳ ಮೇಲಿಂದ ಹಾಯ್ದುಬರುವ ರಸ್ತೆಗಳು ಹುಬ್ಬಳ್ಳಿಯಲ್ಲಿ ಕೂಡುತ್ತವೆ. ಬಸ್ಸಿನ ಓಡಾಟ ಸುರುವಾದಂದಿನಿಂದ ಕೇಳುವದೇನು? ಮುಂಬಯಿಯಿಂದ ಬೆಂಗಳೂರು

ವರೆಗೆ ಹುಬ್ಬಳ್ಳಿಯು ತನ್ನ ಒಳವ್ಯಾಪಾರದ ಕೈಚಾಚಿದೆ. ಕಾರವಾರ ಜಿಲ್ಹೆಯನ್ನು ಸೇರಿ ಸಮುದ್ರವನ್ನು ನೋಡಲಿಚ್ಛಿಸುವವರಿಗೆ—ಹುಬ್ಬಳ್ಳಿಯೇ ಗತಿ. ಭಟ್ಕಳ್ ಬಂದರವಿದೆ, ಕಾರವಾರ ಬಂದರವಿದೆ. ಆದರೆ ಈ ಬಂದರ ಗಳಿಗಿಂತ ಹುಬ್ಬಳ್ಳಿಯಲ್ಲಿ ವ್ಯಾಪಾರದ ಹಂದರವು ಹೆಚ್ಚಾಗಿ ಹಬ್ಬಿದೆ! ಅನೇಕ ಸೆಟ್ಟರು ಬಂದು ಅಲ್ಲಿ ಇಳಿದಿದ್ದರಿಂದ ಅದು ಇಷ್ಟು ದೊಡ್ಡ ಪಟ್ಟಣ ವಾಗಿದೆ. ಈ ಪಟ್ಟಣಕ್ಕೆ ಬಂದೂ ಅನೇಕರು ಸೆಟ್ಟರಾದುದುಂಟು.

ಮೇಲೆ ಹೇಳಿದ ಗಳಗನಾಥರ ವಾಕ್ಯವನ್ನು ನಾನು ಇಲ್ಲಿ ನೆನಿಸ ಬೇಕಾಗಿತ್ತು. ವಿಚಿತ್ರವೆಂದರೆ ಇದು—ಹುಬ್ಬಳ್ಳಿಯಲ್ಲಿ ಆರೂಢರು ಬಂದು ನೆಲಿಸಿದ್ದು! ಭೌತಿಕ ವ್ಯವಹಾರದ ಕೇಂದ್ರವಾದ ಹುಬ್ಬಳ್ಳಿಗೆ ವೈರಾಗ್ಯಶಾಲಿ ಗಳಾದ ಆರೂಢರು ಬಂದು ನೆಲಿಸಿದ್ದೇಕೆ? ಆರ್ಥಿಕಸ್ಥಿತಿಗೂ ಧರ್ಮಕ್ಕೂ ಸಂಬಂಧವೇನಾದರೂ ಇದೆಯೋ? ದುಡ್ಡೇ ದೊಡ್ಡಪ್ಪನೆಂದು ಜನರು ಹೇಳು ತ್ತಾರೆ. ಆದರೆ ಈ ದೊಡ್ಡಪ್ಪನಿದ್ದಲ್ಲಿ ಆರೂಢಪ್ಪನ ಮಠವು ತಲೆಯೆತ್ತಿದ್ದು ಹೇಗೆ? ತಿಳಿದು ನೋಡಿದರೆ ಇದರಲ್ಲಿ ಆಶ್ಚರ್ಯವೇನೂ ಇಲ್ಲ. ಧರ್ಮದ ಅವಶ್ಯಕತೆಯು ದುಡ್ಡಿದ್ದವರಿಗಲ್ಲದೆ ಮತ್ತಾಗಿಗೆ? ದುಡ್ಡಿದ್ದವರಿಂದ ಬಡವರಿಗೆ ಸಹಾಯವಾಗುವದು—ಧರ್ಮದ ಹೆಸರಿನಲ್ಲಿ ಮಾತ್ರ! ನೆನೆಯಲಾಗದ ಸಾಧನೆ ಗಳಿಂದ ದುಡ್ಡು ಗಳಿಸಿದವರಿಗೆ ತಮ್ಮ ಪಾಪಗಳನ್ನು ತೊಳೆಯಲು ಒಂದೇ ಹಾದಿ—ಧರ್ಮಕ್ಕೆ ಶರಣು ಹೋಗುವದು! ವೈರಾಗ್ಯಮೂರ್ತಿಗಳಾದ ಆರೂಢರು ಕಾಡಿನಲ್ಲಿ ಬಂದು ನೆಲಿಸಿದರು. ಆದರೆ ಅವರ ಸುತ್ತಲೂ ಒಂದು ಸಂಸ್ಥೆಯೇ ತಲೆಯೆತ್ತಿತು.

ಬಸ್ಸುಗಳು ಬರುವದಕ್ಕಿಂತ ಮುಂಚೆ ಹಳ್ಳಿಗಳಿಂದ ಹುಬ್ಬಳ್ಳಿಗೆ ಬರುವದು ಕಠಿಣವಾಗಿತ್ತು. ಅದೇಕೆ ನನಗೂ ಗೊತ್ತಿದೆ. ನಸುಕಿನಲ್ಲೆದ್ದು ಎತ್ತಿನ ಕೊಳ್ಳು ಕಟ್ಟಿದ ನಮ್ಮ ಚಕ್ಕಡಿಯು ಧುಂಡಸಿಯಿಂದ ದೀಪ ಹಚ್ಚಿದ ಮೇಲೆ ಮಾತ್ರ ಹುಬ್ಬಳ್ಳಿಯನ್ನು ಮುಟ್ಟಿತು. ಆ ಹಾದಿ ಎಷ್ಟೆಂದು ಕೇಳುವಿರಾ? ಬಹಳವಾದರೆ ಮೂವತ್ತೈದು ಮೈಲು. ಊಟ ಉಡಿಗೆ ಯನ್ನು ಹಾದಿಯಲ್ಲಿ ತೀರಿಸಿಕೊಂಡು ಹುಬ್ಬಳ್ಳಿಯನ್ನು ಸಮೀಪಿಸಿದಾಗ ಧೋ ಧೋ ಎಂದು ಮಳೆ ಹತ್ತಿ ಧರ್ಮಶಾಲೆಯಲ್ಲಿ ನಾವು ತಳವೂರಬೇಕಾ ಯಿತು. ಮೊನ್ನೆ ಒಂದು ಕಾರಿನಲ್ಲಿ ಧಾರವಾಡದಿಂದ ಧುಂಡಸಿಗೆ ಹೋಗಿದ್ದೆ.

ಹೋಗಿ ಮುಟ್ಟಿ ಅಲ್ಲಿ ಒಂದು ತಾಸು ಕಳೆದು ತಿರುಗಿ ಬರಲು ಮೂರು ತಾಸು ಹಿಡಿಯಿತು. ಆದರೆ ಕಾರಿನಲ್ಲಿ ಕೂತಾಗ ಎರಡು ವಿಚಾರಗಳು ಮಾತ್ರ ಮನಸ್ಸನ್ನು ಕೆರಳಿಸುತ್ತಿವೆ. (೧) ಇದು ನಮ್ಮ ದೇಶದಲ್ಲಿ ತಯಾರಾಗಿಲ್ಲ. (೨) ಇದು ನಮ್ಮ ದೇಶದಲ್ಲಿ ಎಲ್ಲರಿಗೂ ಸಿಗುವದಿಲ್ಲ!

ಆರೂಢರು ಅಲ್ಲಿ ಹೋಗಿ ನೆಲಸಿದ ಮೇಲೆ ಅನೇಕ ವರ್ಷಗಳ ವರೆಗೆ ಹುಬ್ಬಳ್ಳಿಯು ಪಡಿಮೂಲೆಯ ತಳವಿಷ್ಟೇ ಅಲ್ಲ; ಅಧ್ಯಾತ್ಮದ ಕೇಂದ್ರವೂ ಆಯಿತು. ಸರೀಫ ಸಾಹೇಬ, ನಾಗಲಿಂಗಪ್ಪ ಮೊದಲಾದ ಸತ್ಪುರುಷರು ಹಳ್ಳಿಹಳ್ಳಿಗಳಿಂದ ಬಂದು ಆರೂಢರೊಡನೆ ಆತ್ಮವಿನೋದದಲ್ಲಿ ಕಾಲ ಕಳೆಯುತ್ತಿದ್ದರಂತೆ. ಶಾಃಪಿನ ಜನರಿಗೆ ಧರ್ಮವು ಅಫುವಾಗಿಯೊ, ಅಮೃತ ವಾಗಿಯೊ ಪರಿಣಮಿಸುತ್ತದೆ. ಅವರೂ ಮಠದ ಹಾದಿಯನ್ನು ಹಿಡಿದು ದಿನಾಲು ಸಾಗುತ್ತಿದ್ದರು. ಇನ್ನು ಸತ್ಪುರುಷರ ಸೇವೆಗೆಂದು ದುಂಬಾಲು ಬಿದ್ದು ಬರುವವರಾರು? ಗುಜ್ಜರು ಮತ್ತು ಸಾರಸ್ವತರು. ಮುಂಬಯಿ ಯಿಂದ ಬರುವ ಈ ಜನರ ತಂಡತಂಡಗಳಿಂದ ರೇಲ್ವೆಯವರಿಗೆ ಲಾಭವು ಎಷ್ಟೋ ಹೆಚ್ಚಾಗಿರಬೇಕು. ಹೇಗಿದೆ—ವ್ಯವಹಾರದ ಮೇಲೆ ಸಹ ಅಧ್ಯಾತ್ಮದ ವರ್ಚಸ್ಸು!

ಹುಬ್ಬಳ್ಳಿಯ ವ್ಯಾಪವು ಇನ್ನೂ ಬಹಳವಾಗಿದೆ. ಅಧ್ಯಾತ್ಮವೂ ವ್ಯವಹಾರವೂ ಕೂಡಿಯೇ ಇಲ್ಲಿ ಬೀಡುಬಿಟ್ಟಂತೆ ರಾಷ್ಟ್ರೀಯತೆಯೂ ಜಾತೀ ಯತೆಯೂ ಮೊದಲಿನಿಂದ ಇಲ್ಲಿ ಕದನವೆಸಗಿವೆ. ಹುಬ್ಬಳ್ಳಿಯಲ್ಲಿ ಹರಡೀ ಕರರ ಸಿಬಿರವಿದೆ, ದಿವಾಕರರ ಅಧ್ಯಾತ್ಮಿಕ ಕಚೇರಿಯಿದೆ, ದಿವಾಣ ಬಹಾದ್ದೂರ ಕಂಬಳಿಯವರ ಮನೆಯಿದೆ; ಅಂಜುಮಾನ್ ಮುಸ್ಲಿಂ ಶಾಲೆಯೂ ಇದೆ. ಜಾತೀಯತೆಯ ತಿಕೀಟಿನ ಮೇಲೆ ನಿಂತ ಕರ್ನಾಟಕದ ಮೊದಲನೆಯ ಮಂತ್ರಿಯನ್ನು ಹುಬ್ಬಳ್ಳಿಯು ಒದಗಿಸಿಕೊಟ್ಟಿತು. ಆದೇಕೆ ಒಂದು ರೀತಿ ಯಿಂದ ಹುಬ್ಬಳ್ಳಿಯಲ್ಲಿಯೇ ಪಾದ್ರಿ ಮತವು ಜಪ್ಪಿಸಿ ಕೂತುಕೊಂಡ ಬೆಕ್ಕಿ ನಂತೆ ಇಲ್ಲಿಯೂ ತನ್ನ ಬೇಟೆಗಾಗಿ ಕಾಯುತ್ತಿರುತ್ತದೆ.

ಇದೆಲ್ಲ ಹುಬ್ಬಳ್ಳಿಯ ಜೀವಕಳೆಯಾಯಿತು. ಆದರ ದೇಹಸ್ಥಿತಿಯು ಹೇಗಿದೆ? ಹುಬ್ಬಳ್ಳಿಯು ನೋಡಲು ಅಂದವಾಗಿದೆಯೆಂದು ನುಡಿಯುವವರು ಅದನ್ನು ರಾತ್ರಿಯ ವೇಳೆ ಇಲ್ಕನೆಯಿಂದ ಮಾತ್ರ ನೋಡಿರಬೇಕು. ಕಾರ

ಕೊಪ್ಪದ ಸ್ಟೇಶನ್ನಿಗಿಂತ ಕಡೆಯಾಗಿದ್ದ ನಿಲ್ಮನೆಯು ಈಗ ಸುಧಾರಿಸಿ ಒಂದೆರಡು ರೇಲು ಕಟ್ಟೆ (Plat Form) ಗಳನ್ನು ಒಳಕೊಂಡಿದೆ. ಒಂದು ಸೇತುವೆಯು ಅವನ್ನು ಅಲಂಕರಿಸಿದೆ. ರಾತ್ರಿ ಬಂದಾಗ ರೇಲ್ವೆ-ವಸಾಹತು ಗಳಲ್ಲಿಯ ವಿದ್ಯುದ್ದೀಪಗಳ ಸಾಲು ವರ್ಕಶಾಃಪಿನಲ್ಲಿಯ ಎಂಜಿನ್ನುಗಳ ಬೆಳಕು, ದೂರ ಡೊಂಕಾಗಿ ಊರೊಳಗಿಂದ ಶೋಭಿಸುವ ದೀಪಮಾಲೆ— ಹೀಗೆ ಹುಬ್ಬಳ್ಳಿಯಲ್ಲಿ ಸಂತತವಾಗಿ ದೀಪೋತ್ಸವವು ನಡೆದಂತೆ ಭಾಸವಾಗು ತ್ತದೆ. ಆದರೆ ಹಗಲುವೇಳೆ ನೋಡಿದಾಗ ನಾವು ಸತ್ಯಸೃಷ್ಟಿಯ ಭಯಾನ ಕತೆಯನ್ನು ಮನಗಾಣಬಹುದು. ರೇಲ್ವೆ ವಸಾಹತೆಂದರೆ ಅದೊಂದು ಕೊಂಡಿವಾಡವೆಂದೇ ಹೇಳಬೇಕಾಗುತ್ತದೆ. ನಿಲ್ಮನೆಯನ್ನು ದಾಟಿದಮೇಲೆ ಈ ಊರಲ್ಲಿ ನಿಲ್ಲಬಾರದೆಂಬ ಭಾವನೆಯು ಬಲವತ್ತರವಾಗುತ್ತದೆ. ಆ ಓಣಿಗಳು, ಆ ರಸ್ತೆಗಳು, ಆ ಧೂಳಿ, ಆ ಗಾಳಿ, ಆ ಕೊಳಚಿ, ಆ ಸುಗಂಧ! ಇದೇನು ಕೂಪಪೂರಿತ ಪಟ್ಟಣವೋ ಪಾಪಪೂರಿತ ಪಟ್ಟಣವೋ ತಿಳಿಯದಾಗುತ್ತದೆ. ನಳದ ಸುತ್ತಲೂ ನೀರಿಗಾಗಿ ನೆರೆದ ನೀರೆಯರ ಕೇಳಾಕೇಳಿಯನ್ನೂ ಬೈಗಳ ಪ್ರೌಢಿಮೆಯನ್ನೂ ನೋಡಿ ಕೇಳಿ ಎದೆಯು ಕರಗಿ ನೀರಾಗಿಹೋಗುತ್ತದೆ. ಹೆಣ್ಣಿನ ಮಹಾಂಕಾಳೀ ಸ್ವರೂಪವು ತಕ್ಷಣ ಎದುರಿಗೆ ಬಂದು ನಿಲ್ಲುತ್ತದೆ. ಹೋದಲ್ಲೆಲ್ಲ ಗಾನದೋಸೆಗಳಲ್ಲಿ ಅಡಗಿಕೊಂಡು ದೋಸೆಗಳನ್ನು ತಿನ್ನುತ್ತ ಕುಳಿತ ಜನರೆದುರಿಗೆ ಕೋಣದ ಮುಂದೆ ಕಿನ್ನರಿ ಬಾರಿಸಿದಂತೆ—ಹೊಟ್ಟೆ ತುಂಬಿದ ಮೇಲೆ ಹುಗ್ಗಿಯು ನೆಗ್ಗುಲಿಮುಳ್ಳಾಗುವಂತೆ ಹೊತ್ತಿಲ್ಲ ದಿಕ್ಕಿಲ್ಲ, ಹಗಲಿಲ್ಲ ರಾತ್ರಿಯಿಲ್ಲ, ಒಂದೇಸವನೆ ಗಂಟಲು ಹರಿದುಕೊಂಡು ಒದರುವ ಸುಂದರಿಯರ ಗಾನವನ್ನು ಕೇಳಿ—ಯಾ! ಪರವರದಿಗಾರ ಅಲ್ಲಾ! ಶಿವಾ! ಶಿವಾ! ಕೃಷ್ಣ! ಕೃಷ್ಣಾ! ಮಹಾತ್ಮಾ ಗಾಂಧೀಕೀ ಜೈ! ಎಂದು ಘೋಷಿಸುತ್ತ ಓಡಿಹೋಗುವ ಹಾಗಾಗುತ್ತದೆ. ಇದು ಹುಬ್ಬಳ್ಳಿಯ ದೇಹಾರೋಗ್ಯ, ಅಲ್ಲಿಯ ಜನರ ಭೋಗ್ಯ.

ಹುಬ್ಬಳ್ಳಿಯಲ್ಲಿರುವ ನೂರು ಮತಗಳಲ್ಲಿ ಕನ್ನಡ ಮತಕ್ಕೆ ಯಾವ ಸ್ಥಾನವಿದೆ? ಕನ್ನಡ ಕುಲಕ್ಕೆ ಅಲ್ಲಿ ಯಾವ ಭವಿತವ್ಯತೆಯು ಕಾದಿದೆ? ಶಿವ ನಾಗಪ್ಪನವರ ಪುಸ್ತಕಾಲಯದಲ್ಲಿ ಕನ್ನಡ ಪುಸ್ತಕಗಳು ಸಿಗುತ್ತಿದ್ದವೆಂಬ ವಾರ್ತೆ ಅನೇಕ ವರ್ಷಗಳಿಂದ ಸುತ್ತಲಿನ ಹಳ್ಳಿಯವರಿಗೆಲ್ಲ ಗೊತ್ತಿದೆ.

ಬಳ್ಳಾರಿಯಲ್ಲಿ ಹಿಂದಕ್ಕೆ ಅಚ್ಚಾಗಿ ಮಣಗಟ್ಟಲೆಯಾಗಿ ಕೊಡುತ್ತಿದ್ದ ಪುಸ್ತಕಗಳೇ ಇರಲೊಲ್ಲವೇಕೆ, ಕನ್ನಡವೆಂದರೆ ಅವರ ಅಂಗಡಿಯಲ್ಲಿ ಜೀವಂತವಾಗಿತ್ತು. ಈಗ್ಗ ಅದರ ಜತೆಗೆ ಮತ್ತೆ ಬೇರೆ ಭಾಂಡಾರಗಳು ಬೆಳೆದಿವೆ. ಹುಬ್ಬಳ್ಳಿಯಲ್ಲಿಯ ಪತ್ರಿಕೆಗಳು ಕನ್ನಡ ಪ್ರಚಾರದ ಕೆಲಸವನ್ನು ಶ್ರದ್ಧೆಯಿಂದ ವಹಿಸಿವೆ. ವಾದಗ್ರಸ್ತವಾದ ಹಿಂದೀ ಪ್ರಚಾರದ ಸತ್ಯಾಸತ್ಯತೆಗಳನ್ನು ಬಿಟ್ಟರೆ ರಾಷ್ಟ್ರೀಯತೆಯೂ ಕನ್ನಡಕ್ಕೆ ಪೋಷಕವಾಗುತ್ತ ಬಂದಿದೆ ; ಕನ್ನಡದಲ್ಲಿ ಅದು ಮಾಡಿದ ಕೆಲಸವು ಕನ್ನಡಿಗರಿಗೆಲ್ಲ ಚಿರಪರಿಚಿತವಾಗಿದೆ. ರಾಷ್ಟ್ರದಮಹತ್ವದ ಪ್ರಶ್ನೆಗಳನ್ನು ಸ್ವಲ್ಪ ಹೊತ್ತು ಬದಿಗಿಟ್ಟು ಸ್ಥಾನಿಕ ಸ್ವರಾಜ್ಯದ ಸ್ಥಾನಮಾನಗಳನ್ನು ಸ್ಥಿರಗೊಳಿಸಲು ಹರಡೀಕರರು ಮಾಡಿದ ಪ್ರಯತ್ನವೂ ಇದೇ ದೃಷ್ಟಿಯ ದ್ಯೋತಕವಾಗಿದೆಯೆನ್ನಬಹುದು. ಶಿವೈಕ್ಯರಾದ ಶ್ರೀ ಸಿದ್ಧರಾಮಪ್ಪ ಪಾವಟೆಯವರು ಮೊನ್ನೆಮೊನ್ನೆಯವರೆಗೆ ಹುಬ್ಬಳ್ಳಿಯಲ್ಲಿ ಕನ್ನಡದ ಚಳವಳಿಯ ಕೈಕಂಬವಾಗಿದ್ದರು. ಶ್ರೀ ಗಾಂವಕರರಂಥ ಕವಿಗಳು ಹುಬ್ಬಳ್ಳಿಯಲ್ಲಿ—ಅದರಲ್ಲಿಯೂ ಸ್ಥಾನಿಕ ಸ್ವರಾಜ್ಯದಮಂದಿರದಲ್ಲಿ—ತಮ್ಮ ಕವಿತ್ವವನ್ನು ಸಂರಕ್ಷಿಸಿಕೊಂಡು ಬಂದುದು ಹೆಚ್ಚಿನ ಮಾತೆನಬೇಕು. ಇನ್ನು ಕನ್ನಡದ ವೀಣೆಯನ್ನು ಮಿಡಿಯುತ್ತಿರುವ ಕೆಲವು ಸಂಘಗಳೂ ಇಲ್ಲಿವೆ. ಮಿತ್ರಮಂಡಲಿಯವರು ಅನೇಕ ವರ್ಷಗಳಿಂದ ಇಲ್ಲಿ ಕನ್ನಡದ ಪ್ರಚಾರವನ್ನು ಸಾಗಿಸಿಕೊಂಡು ಬಂದಿದ್ದಾರೆ. ಸತ್ಯಬೋಧ ವಾಚನಾಲಯದವರು ಇಂದಿನ ಕನ್ನಡ ಪುಸ್ತಕಗಳನ್ನು ಮನೆಮನೆಗೆ ಮುಟ್ಟಿಸಿ ಜನರಿಂದ ಓದಿಸುವ ಕೆಲಸವನ್ನು ಕೈಕೊಂಡದ್ದಲ್ಲದೆ ಮಿತ್ರಮಂಡಳಿಯವರಂತೆ ಸಾಹಿತ್ಯೋಪನ್ಯಾಸಗಳಿಗಾಗಿ ಆಗೀಗ ಏರ್ಪಾಡು ಮಾಡುತ್ತಾರೆ. ಮಿತ್ರಮಂಡಲಿಯವರು ಸಾಹಿತ್ಯದಲ್ಲಿಯೂ, ರಂಗಭೂಮಿಯ ಮೇಲೂ ಸುಳಿದಾಡುವದು ಅನೇಕರಿಗೆ ಗೊತ್ತಿರಬಹುದು.

ಆದರೆ ಇಲ್ಲಿಯ ಕನ್ನಡತನದ ಸಸಿಗೆ ಮಂಜು ತಾಕದೆ ಇಲ್ಲ. ಇಲ್ಲಿಯ ಕನ್ನಡದ ಕುನ್ನಿಯ ಮೇಲೆ ಹದ್ದೆರಗದೆ ಇಲ್ಲ. ಪುಣೆಯಲ್ಲಿ ಒಂದೂ ಕನ್ನಡ ಶಾಲೆ ಇಲ್ಲದಾಗ ಹುಬ್ಬಳ್ಳಿಯಲ್ಲಿ ಮರಾಠಿ ಶಾಲೆಗಳಿರುವ ಅರ್ಥವೇನು ? ಕರ್ನಾಟಕದ ಎಲ್ಲ ಅನ್ಯಭಾಷಾ ಶಾಲೆಗಳಲ್ಲಿ ಕನ್ನಡವನ್ನು ಕಲಿಸುವದು ಅವಶ್ಯವೆಂದು ಗೊತ್ತುಪಡಿಸಿದರೆ-ಕರ್ನಾಟಕೀಯ ಮಹಾರಾಷ್ಟ್ರಿಗರು, ಮಹಾರಾಷ್ಟ್ರೀಯರು ಕೂಡಿಯೇ ‘ ಇದು ಅನ್ಯಾಯ, ಇದರ ವಿರುದ್ಧ ಚಳವಳಿ

ಹೂಡಬೇಕು' ಎಂದು ಮನೆಮನೆಗೆ ಪ್ರಚಾರ ಮಾಡುತ್ತಾರೆ. ಆದರೆ ಪುಣೆಯಲ್ಲಿ ಮರಾಠಿ ಕಲಿಸಿದ ಶಾಲೆಗಳಿರಲಿ, ಅವುಗಳನ್ನು ಮೊದಲು ಮುಗಿಸಲು ಎಲ್ಲರೂ ಮುಗಿಬೀಳುತ್ತಾರೆ. ಎಲ್ಲಿಯೋ ಕೇಳಿದ ನೆನಪಿದೆ—ಪುಣೆಯಲ್ಲಿ ರೇಡಿಯೋಗಳನ್ನು ಕೊಂಡ ಕೆಲವರು ತಮಗೆ ಮರಾಠೀ ಬರುವದಿಲ್ಲವೆಂದು ಅಖಿಲ ಹಿಂದುಸ್ತಾನ ರೇಡಿಯೋ ಕಚೇರಿಗೆ ತಿಳಿಸಿದರಂತೆ. ಆಗ ಮಹಾರಾಷ್ಟ್ರೀಯರು, 'ಇದು ಹೇಗೆ ಸಾಧ್ಯ? ಪುಣೆಯಲ್ಲಿದ್ದು ಮರಾಠೀ ಬರುವದಿಲ್ಲವೆಂದರೇನು?' ಎಂದು ಘೋಷಿಸಿದರು. ಈ ಘೋಷಣೆಯಲ್ಲಿ ಸತ್ಯವಿದೆ. ಅದು ನ್ಯಾಯವಾದದ್ದು. ಆದರೆ ಇದೇ ಮಾತು ಉಳಿದ ಪ್ರಾಂತಗಳಿಗೂ ಅನ್ವಯಿಸುವದೆಂಬದನ್ನು ಯಾರೂ ಮರೆಯಬಾರದು.

ಹುಬ್ಬಳ್ಳಿಯಲ್ಲಿ ಒಂದು ಸಾರ್ವಜನಿಕ ವಾಚನಾಲಯವಿದೆಯಂತೆ. ಅಲ್ಲಿ ಮರಾಠಿಯೇ ಅತ್ತೆ, ಕನ್ನಡವೇ ಸೊಸೆಯೆಂದು ನಾವು ಕೇಳಿದ್ದೇವೆ. 'ಹುಬ್ಬಳ್ಳಿಯಲ್ಲಿ ರಾಜಕೀಯ ಭಾಷಣಗಳೇ ಹೆಚ್ಚು. ಇಲ್ಲಿಯ ಸಾಂಸ್ಕೃತಿಕ ಜೀವನವನ್ನು ಬೆಳೆಯಿಸಲು ಯಾರೂ ಪ್ರಯತ್ನಿಸುವದಿಲ್ಲ'ವೆಂದು ದೂರಿ ಆ ಹೊಣೆಯು ತಮ್ಮ ಮೇಲೆಯೇ ಇದೆಯೆಂದು ಇಲ್ಲಿಯ ಮಹಾರಾಷ್ಟ್ರ ಮಂಡಲದವರು 'ವಸಂತ ವ್ಯಾಖ್ಯಾನಮಾಲೆ'ಯನ್ನು ಪ್ರಾರಂಭಿಸುವ ಕನಸು ಕಾಣುತ್ತಾರಂತೆ. ಇಂಥ ಮಂಡಳಗಳಿಗೆ ಕರ್ನಾಟಕದ ಸಾರ್ವಜನಿಕ ಜೀವನದಲ್ಲಿ ಹೇಗೆ ಮನ್ನಣೆಯು ಸಾಧ್ಯವೆಂಬುದನ್ನು ಅವರು ಮೊದಲು ವಿಚಾರಿಸಬೇಕು.

ಇಲ್ಲಿ ನೆಲಿಸಿದ್ದ ಪ್ರಸಿದ್ಧ ಡಾಕ್ಟರರು ಬಹುತೇಕ ಮಹಾರಾಷ್ಟ್ರೀಯರೇ ಎಂದು ಹೇಳಬೇಕಾಗುತ್ತದೆ. ಆಗಲಿ, ಅದರಿಂದ ನಮಗೆ ಸಂತೋಷವೇ ಇದೆ. ಆದರೆ ಇಂಥವರಿಂದ ಕನ್ನಡಕ್ಕೆ ಸಹಾಯವೇನಾದರೂ ಆಗಿದೆಯೋ? ಹಳ್ಳಿಯವರನ್ನು ಬಿಟ್ಟು ಉಳಿದವರಾರೇ ಬರಲಿ, ಅವರೊಡನೆ ಇಂಗ್ಲೀಷು ಇಲ್ಲವೆ ಮರಾಠಿ ಮಾತನಾಡುವದೇ ವಾಡಿಕೆಯಾಗಿದೆಯೆಂದು ಸುದ್ದಿಯಿದೆ. ಕನ್ನಡವು ಬಂದರೂ ಮಾತನಾಡದೆ ಇರುವಲ್ಲಿ ಭೂಷಣವೇನು ಬಂತು?

ಹಿಂದಕ್ಕೊಮ್ಮೆ ಹುಬ್ಬಳ್ಳಿಯ ಸಾರ್ವಜನಿಕ ಜೀವನದಲ್ಲಿ ಪ್ರಚಂಡ ವಿಷವಾಯುವೊಂದು ಬೀಸಿತು. ಆರೂಢ ಸ್ವಾಮಿಗಳ ಮಠದ ಜಗಳ,

ಮುನಸಿಪಾಲ್ಟಿಯ ರಾವಣ ರಾಜ್ಯ, ಜಾತಿ-ಜಾತಿಗಳ ಬಡಿದಾಟ—ಇವೆಲ್ಲ ಊರು ತುಂಬಿ ಹರಡಿದವು. ಎಲ್ಲವೂ ಸಮಾಧಾನಕರವಾಗಿ ನಡೆಯಿತೆಂದು ವಿಶ್ರಮಿಸುವಷ್ಟರಲ್ಲಿ ರಾಮದುರ್ಗದ ದುರಂತದಿಂದ ಪುಷ್ಟಿಗೊಂಡ ಜಾತಿಯ ಪೆಡಂಭೂತವು ನಾಡಹಬ್ಬದ ಹಾದಿಯಲ್ಲಿ—ಏಕೀಕರಣದ ಹಾದಿಯಲ್ಲಿ—ಅಕರಾಳ ವಿಕರಾಳವಾಗಿ ಬಂದು ನಿಂತಿತು. ಹುಬ್ಬಳ್ಳಿಯು ಇಂಥ ವಿಷಮತೆಗಳನ್ನೆಲ್ಲ ಬದಿಗೊತ್ತಿ ಕನ್ನಡದ ಬಳ್ಳಿಗೆ ಬಿಟ್ಟ ಹೂವಾಗಲೆಂದು ನಾವು ಹಾರೈಸಬಹುದೆ ?

—ಕ್ರಾಂತಿಪ್ರಿಯ

---

# ಹುಲಗೂರು

[illegible] ನಾನು ಹುಬ್ಬಳ್ಳಿಯಿಂದ ಲೋಕಲ್ ಗಾಡಿಗೆ ಹತ್ತಿ ಹುಲಗೂರಿಗೆ ಬರಬೇಕೆಂದು ಹೊರಟೆ. ನಾನು ಹುಲಗೂರಿಗೆ ಹೋದದ್ದು ಇದೇ ಮೊದಲನೆ ಸಲ. ಲೋಕಲ್ ಗಾಡಿಯು ಗುಡಗೇರಿಗೆ ಸುಮಾರು ೧೧ ಘಂಟೆಗೆ ತಲುಪಿತು. ಅಲ್ಲಿ ಝುಟಕಾ ಗಾಡಿಗಳು ಇರುವವೆಂದು ನನಗೆ ಹೇಳಿದ್ದರು. ಆದರೆ ನನ್ನ ಅದೃಷ್ಟಕ್ಕೆ ಅಂದು ಝುಟಕಾಗಾಡಿಗಳು ಇರಲಿಲ್ಲ. ಇನ್ನೇನು ಮಾಡಬೇಕೆಂಬ ವಿಚಾರದೊಳಗೆ ತೊಡಗಿದೆ. ಕಡೆಗೆ ನಡೆದುಹೋಗದೆ ಗತ್ಯಂತರವಿಲ್ಲ ಎಂದು ಅನಿಸಿತು. ಐದು ಮೈಲು ಬಹಳವಲ್ಲ, ಎರಡು ತಾಸಿನಲ್ಲಿ ಹೋಗಬಹುದು, ಎಂದು ನಿರ್ಧರ ಮಾಡಿದೆ. ಅದರಂತೆ ಕೈಯಲ್ಲಿ ಚೀಲವನ್ನು ಹಿಡಕೊಂಡು ಊರ ಕಡೆಗೆ ಹೊರಟೆ. ಭಯಂಕರ ಬಿಸಿಲು, ಭರ್ತಿ ಆರು ತಾಸು, ಎಲ್ಲ ಒಕ್ಕಲಿಗರೂ ಹೊಲದ ಕೆಲಸ ಮುಗಿಸಿಕೊಂಡು ಮನೆಗೆ ಹೋಗಿದ್ದಾರೆ. ದಾರಿಯಲ್ಲಿ ಮನುಷ್ಯರ ಮೋರೆ ಕಾಣುವದೇ ಅಪರೂಪ. ಕೊಡೆಯನ್ನು ತರದ್ದರಿಂದ ನನ್ನ ಮಸ್ತಕವು ಎಲ್ಲಿ ಒಡೆದುಹೋಗುವದೋ ಎಂಬ ಭೀತಿ ಹುಟ್ಟಿತು. ಕಾಲಲ್ಲಿ ಪಾದರಕ್ಷೆಗಳಿದ್ದುದೊಂದು ಒಳ್ಳೆಯದಾಯಿತೆಂದು ಮನಸ್ಸಿಗೆ ಸಮಾಧಾನ ಹಚ್ಚಿಕೊಂಡೆ.

ಹೀಗೆ ನಡೆಯುತ್ತ ದಾರಿಯಲ್ಲಿ ಮುಂಡಿಗನಾಳ ಮತ್ತು ಅತ್ತೀಗೇರಿ ಎಂಬ ಎರಡು ಹಳ್ಳಿಗಳನ್ನು ದಾಟಿ ಮುಂದೆ ಸಾಗಿದೆ. ಇನ್ನು ಹುಲಗೂರಿಗೆ ಮೂರೇ ಮೈಲು. ಎಂದೂ ನಡೆದುಹೋಗದಿದ್ದ ನನಗೆ ಇದು ಒಂದು ದೊಡ್ಡ ಸಾಹಸವೆಂದೇ ಎನಿಸಿತು. ಅದೇ ವೇಳೆಯಲ್ಲಿ ಒಬ್ಬ ಕಳ್ಳನು ತಪ್ಪಿಸಿಕೊಂಡು ಹೋಗಿದ್ದನೆಂದು ಸುದ್ದಿ ಹಬ್ಬಿತ್ತು. ಅವನು ಅನೇಕರನ್ನು ಸದೆಬಡಿದು, ಬಣಿವೆಗಳನ್ನು ಸುಟ್ಟು, ಕಾಳುಗಳನ್ನು ಕದ್ದೊಯ್ಯುತ್ತಿದ್ದನು. ಅವನ ಹತ್ತಿರ ಯಾವಾಗಲೂ ಒಂದು ಚಪಗೊಡಲಿಯು ಇದ್ದೇ ಇರುತ್ತಿತ್ತು. ಅವನನ್ನು ಹಿಡಿದವರಿಗೆ ನೂರು ರೂಪಾಯಿ ಬಹುಮಾನ ಕೊಡುವರೆಂದು ಜಾಹೀರು ಮಾಡಿದ್ದರು. ನಾನು ನಡೆದ ಹಾಗೆಲ್ಲ ಈ ವಿಚಾರಗಳು ಬರಹತ್ತಿದವು. ಯಾರಾದರೊಬ್ಬರು ಗಿಡದ ಕೆಳಗೆ ಮಲಗಿದ್ದರೆ ಅವನು ಇಮಾಮ (ಆ ಕಳ್ಳನ ಹೆಸರು) ಇರಬಹುದೆಂದೇ ನನ್ನ ತರ್ಕ. ಹೀಗೆ ಅಂಜುತ್ತ ಬಿಸಿಲಿನ ತಾಪಕ್ಕೆ ಬಳಲಿ, ಹಸಿವೆಯಿಂದ ಕಂಗಾಲಾಗಿ ಹೋಗಿದ್ದ ನನಗೆ ಎಷ್ಟು ನಡೆದರೂ ಊರಿನ ಚಿಹ್ನಗಳೇ ಕಾಣದಾದವು. ಆಮೇಲಂತೂ ಮತ್ತಿಷ್ಟು ಅಂಜಿಕೆ ಬಂತು. ಎಲ್ಲಿ ಹಾದಿ ತಪ್ಪಿದೆನೋ ಎಂಬ ಭಯ. ಏನು ಮಾಡಬೇಕೆಂಬುದು ತೋಚ ದಾಯಿತು. ನನ್ನ ಕಾಲುಗಳೇ ನನ್ನನ್ನು ದೂಡಿಕೊಂಡು ಹೋಗುತ್ತಿದ್ದವು. ಹೀಗೆ ನಡೆದು ಕಡೆಗೊಮ್ಮೆ ದಾರಿಗುಂಟ ಅಡ್ಡ ಹೊರಳಿದೆ. ನೋಡಲಾಗಿ ಹುಲಗೂರ ಗುಡಿಸಲುಗಳು, ಮನೆಗಳು ಕಾಣಹತ್ತಿದವು.

× × × ×

ಹುಲಗೂರಿಗೆ ಒಬ್ಬರು 'ಟಪ್ಪು' ಎಂದು ಕರೆದಿದ್ದಾರೆ. ಹುಲಗೂರು ಇಷ್ಟು ವರ್ಷದಲ್ಲಿಯೇ ಬಹಳ ಮುಂದು ಬರಬಹುದಾಗಿತ್ತು. ಆದರೆ ಅದು ಸುತ್ತಲಿನ ವಾತಾವರಣದ ಮೂಲಕವೆಂಬುದು ಸ್ಪಷ್ಟವಾಗುತ್ತದೆ. ಅದು ಗುಡಗೇರಿಯಿಂದ ಐದು ಮೈಲು ದೂರ, ಸವಣೂರಿನಿಂದ ಒಂಬತ್ತು ಮೈಲು ದೂರು ಮತ್ತು ಶಿಗ್ಗಾವಿಯಿಂದ ಎಂಟು ಮೈಲು. ಹೀಗೆ ಅದರ ಭೌಗೋಲಿಕ ಸ್ಥಿತಿಯು ಇರುತ್ತದೆ. ಇಷ್ಟು ದಾರಿಗಳಲ್ಲಿ ಒಂದೂ ನೆಟ್ಟಗಿಲ್ಲ. ಶಿಗ್ಗಾವಿಯಿಂದ ಹುಲಗೂರಿನವರೆಗೆ 'ಕಚ್ಚಾ' ಲೈನಿದೆ. ಸವಣೂರಿನಿಂದ ಹುಲಗೂರಿನವರೆಗೆ ಚಕ್ಕಡಿ ಹೊಡೆದದ್ದೇ ಅಥವಾ ಕಾಲುದಾರಿ ಬಿದ್ದದ್ದೇ ದಾರಿ. ಮಳೆಗಾಲದಲ್ಲಿ ಈ ದಾರಿಗಳು ಅಳುಕಿ ಹೋಗಲು, ಮತ್ತೆ ಬೇರೆ ದಾರಿಗಳನ್ನು ಮಾಡುತ್ತಾರೆ.

ಹೀಗಾಗಿ ವರುಷ ವರುಷಕ್ಕೆ ದಾರಿಗಳು ಬದಲಾಗುತ್ತಲೇ ಹೋಗುತ್ತವೆ. ಹುಲಗೂರಿಂದ ಗುಡಗೇರಿಗೆ ಹೋಗುವ ರಸ್ತೆಯು ಏರಿ, ಕಲ್ಲುಬಂಡೆಗಳಿಂದ ತುಂಬಿದೆ. ದಾರಿಯು ಬೋರ್ಡಿನವರ ಕೈಯಲ್ಲಿದ್ದರೆ ಇಷ್ಟರಲ್ಲಿಯೇ ಸ್ವಲ್ಪ ಸುಧಾರಿಸಬಹುದಾಗಿತ್ತು. ಆದರೆ ಆ ಐದು ಮೈಲುಗಳ ನಡುವೆ ಮೂರು ಹದ್ದುಗಳಿರುವದರಿಂದ ಪ್ರತಿಯೊಬ್ಬರು ತಮಗೇಕೆ ಬೇಕೆಂದು ನಿಶ್ಚಿಂತರಾಗಿ ಕುಳಿತು ಬಿಟ್ಟಿದ್ದಾರೆ. ಈ ರಸ್ತೆ ನೆಟ್ಟಗಾದಾಗಲೇ ಹುಲಗೂರ ದೈವ ತೆರೆಯ ಬೇಕು. ಅಂತೂ ಅನೇಕ ಕಾರಣಗಳ ಮೂಲಕ ಹುಲಗೂರು ಹಿಂದುಳಿದಿದೆ.

ಹುಲಗೂರು ತಗ್ಗುಪ್ರದೇಶ. ನೀರು ಹವೆಗಳು ಉತ್ತಮ ತರಗತಿಯವು. ಬೇರೆ ಕಡೆ ಎಲ್ಲ ನೀರಿನ ಬರಬಿದ್ದರೂ ಇಲ್ಲಿ ಬೀಳುವದಿಲ್ಲ. ಅಲ್ಲಲ್ಲಿ ಗದ್ದೆಗಳು ಉಂಟು. ಊರ ಮುಂದೆಯೇ ಒಂದು ಹಳ್ಳ ಹರಿದಿದೆ. ಇದರಿಂದ ಗದ್ದೆಗಳಿಗೆ ಬಹಳ ಉಪಯೋಗವಾಗುತ್ತದೆ. ಸುತ್ತಲೆಲ್ಲ ಎರೆಯ ಜಮೀನು. ಜೋಳ, ಹತ್ತಿ, ಗೋದಿ, ಕುಸಿಬೆ ಮುಂತಾದ ಕಾಳುಗಳನ್ನೂ ಎಲ್ಲ ತರದ ಕಾಯಿಪಲ್ಲೆ ಗಳನ್ನೂ ಬೆಳೆಯುತ್ತಾರೆ. ಊರ ಜನಸಂಖ್ಯೆ ಮೂರು ಸಾವಿರಕ್ಕೆ ಮಿಕ್ಕಿದೆ. ಇಟುಕವಾದ ಓಣಿಗಳಿವೆ. ಮನೆಗಳು ಹಳ್ಳಿಯ ಮನೆಗಳಂತೆಯೇ ಇವೆ. ಜೇರುಗಿಂಡಿಗಳನ್ನು ಅವು ಕಾಣುವದೇ ಇಲ್ಲ. ಹೀಗಾಗಿ ಯಾವದಾದರೊಂದು ಬೇನೆಯು ಬಂದಿತೆಂದರೆ ಅದಕ್ಕೆ ಬೇಗನೆ ಹೋಗುವದಕ್ಕೆ ಮನಸ್ಸಾಗುವದಿಲ್ಲ ವೆಂದು ತೋರುತ್ತದೆ. ಸುಮಾರು ಎಂಟು ತಿಂಗಳಲಾಗಾಯತು ಪ್ಲೇಗು ಹುಲಗೂರನ್ನು ಬಿಟ್ಟೇ ಇಲ್ಲ. ಊರಲ್ಲಿ ಯಾರಾದರೂ ಸತ್ತರೆ ಹಲಿಗೆ ಹೊಡೆ ಯುವ ಪದ್ಧತಿ ಇದೆ. ನಡುವೆ ಪ್ಲೇಗು ಹೆಚ್ಚು ಆದಾಗ್ಗೆ ದಿನಾಲು ಮೂರು ನಾಲ್ಕು ಜನರು ಸಾಯುತ್ತಿದ್ದರು. ಇದರಿಂದ ಹಲಿಗೆಯ ಬಡಿತವೂ ಎಲ್ಲ ಕಡೆಯಿಂದಲೂ ಕೇಳಬರಹತ್ತಿತು. ಊರಿಗೆ ಊರೇ ರಣಕುಂಡದಲ್ಲಿ ಇದ್ದಂತೆ ತೋರಹತ್ತಿತು. ಆದ್ದರಿಂದ ಈಗ ಸತ್ತರೆ ಹಲಿಗೆ ಹೊಡೆಯಬಾರದೆಂದು ಜಾಹೀರು ಮಾಡಿದ್ದಾರೆ.

ಹುಲಗೂರಿನ ಸುತ್ತಲೂ ಅನೇಕ ಸಣ್ಣ ಸಣ್ಣ ಹಳ್ಳಿಗಳಿವೆ. ಎಲ್ಲ ಹಳ್ಳಿಗಳೂ ೨—೩ ಮೈಲುಗಳಿಗಿಂತ ಹೆಚ್ಚಿಗೆ ದೂರ ಆಗುವದಿಲ್ಲ. ಮಂಡಿಗನಾಳ, ಅತ್ತಿಗೇರಿ, ಬಸನಾಳ, ಶಿಶುನಾಳ, ಕ್ಯಾಳಕೊಂಡ, ಕಾರಡಗಿ, ಮಾದಾಪುರ, ಪಾಣೀಗಟ್ಟಿ ಇವೇ ಮೊದಲಾದ ಹಳ್ಳಿಗಳಿಂದ ಹುಲಗೂರು

ಸಂತೆಗೆ ಜನರು ಬರುತ್ತಾರೆ. ಕಾರಡಿಗೆಯಲ್ಲಿ ವೀರಭದ್ರದೇವರ ಗುಡಿಯಿದೆ. ಅಲ್ಲಿ ದರವರುಷ ಜಾತ್ರೆಯಾಗುತ್ತದೆ. ಮಂತ್ರೋಡಿಯಲ್ಲಿ ಸುಮಾರು ೯–೧೦ ಫೂಟು ಎತ್ತರವಾದ ಹನುಮಂತದೇವರ ವಿಗ್ರಹವಿದೆ. ಪಾಣೀಗಟ್ಟಿಯಂತೂ ಹೆಸರಿಗೆ ಪಾಣೀಗಟ್ಟಿಯಾದರೂ ನೀರಿಲ್ಲದ ಊರು. ಅಂತೇ ನೀರು ಹೊರುವ ವಕ್ಕೆ 'ಪಾಣೀಗಟ್ಟಿ ಪಾಳಿ' ಎಂದು ರೂಢಿಯಲ್ಲಿ ಬಂದಿದೆ. ನೀರು ಹೊರು ವವರನ್ನು ವಿನೋದದಿಂದ 'ಪಾಣೀಗಟ್ಟಿ ಮಾಮಲೇದಾರ' ಎಂದೂ ಕರೆಯು ತ್ತಾರೆ. ಶಿಶುನಾಳದಲ್ಲಿ ಸರೀಫಸಾಹೇಬರ ಗದ್ದಿಗೆಯಿದ್ದು ಅಲ್ಲಿಯೂ ಕಳೆದ ಎರಡು ವರುಷಗಳಿಂದ ಜಾತ್ರೆಯಾಗಹತ್ತಿದೆ. ಹುಲಗೂರಿನಲ್ಲಿ ಬಸವಣ್ಣದೇವರ ಜಾತ್ರೆಯಾಗುತ್ತದೆ.

ಈ ಎಲ್ಲ ಊರುಗಳ ಮಧ್ಯದಲ್ಲಿ ಹುಲಗೂರು ಇರುವದರಿಂದ ಇಲ್ಲಿಯೇ ಒಂದು ಬೋರ್ಡಿನ ಶಾಲೆಯು ಇದೆ. ಮತ್ತು ಅಲ್ಲಿ ಏಳನೇ ಇಯತ್ತೆಯವರೆಗೆ ಕಲಿಸುತ್ತಾರೆ. ಸುತ್ತಲಿನ ಹಳ್ಳಿಯ ಹುಡುಗರು ೪ ರಿಂದ ೭ ಇಯತ್ತೆಯನ್ನು ಇಲ್ಲಿಯೇ ಕಲಿಯುತ್ತಾರೆ. ಹುಲಗೂರು ಎಂದು ಹೆಸರನ್ನು ಕೇಳಿದ ಕೂಡಲೆ ಅಲ್ಲಿಯ ಉರುಸು ನೆನಪಾಗುತ್ತದೆ. ನಿಜವಾಗಿ ನೋಡಿದರೆ ಹುಲಗೂರಿಗೂ ಉರುಸಿಗೂ ಏನೂ ಸಂಬಂಧವಿಲ್ಲ. ಹುಲಗೂರಿನಲ್ಲಿ ಹೇಳಿಕೊಳ್ಳುವಷ್ಟು ಮುಸಲ್ಮಾನರೂ ಇಲ್ಲ. ಉರುಸು ಆಗುವ ಜಾಗೆಯ ಹೆಸರು 'ದರ್ಗಾ,' ಅದು ಹುಲಗೂರಿನಿಂದ ಅರ್ಧ ಮೈಲು ಅಂತರದ ಮೇಲೆ ಇದೆ. ಅಲ್ಲಿ ಅದಿಲ್ ಶಹಾ ಖಾದರಿ ಎಂಬ ಸತ್ಪುರುಷರ ಉರುಸು ಆಗುತ್ತದೆ. ಆದಿಲ್ ಶಹಾ ಖಾದರಿಯವರು ವಿಜಾಪುರದವರಂತೆ. ಇವರ ಅಜ್ಜಂದಿರು ಕೂಡ ಮಹಾಸತ್ಪುರುಷರಾಗಿದ್ದರೆಂದು ಹೇಳುತ್ತಾರೆ. ವಿಜಾಪುರವು ಹಾಳಾದ ಮೇಲೆ ಆ ಸಾಧು ಸತ್ಪುರುಷರು ಅಲ್ಲಿಂದ ಇತ್ತ ಕಡೆಗೆ ಬಂದರು. ಖಾದರಿ ಯವರೇ ಕಡೆಯವರು. ಇವರ ವಿಷಯವಾಗಿ ಒಂದು ಕಥೆಯಿದೆ. ಅದೇ ನೆಂದರೆ–ಇವರು ಒಬ್ಬ ಅನಾಥ ಬಾಲಿಕೆಯನ್ನು ಸಾಕಿದ್ದರಂತೆ. ದಿನಾಲು ಹುಳ್ಳಿಕೊಪ್ಪಿಯಿಂದ ಸವಣೂರ ಮೊದಲಾದ ಪ್ರದೇಶಗಳಿಗೆ ಬಂದು ಭಿಕ್ಷೆ ಬೇಡಿ ತಿರುಗಿ ತಮ್ಮ ವಾಸಸ್ಥಳವಾದ ಹುಳ್ಳಿಕೊಪ್ಪಿಗೆ ಹೋಗುತ್ತಿದ್ದರಂತೆ. ಅವರು ತಮ್ಮ ಸಂಗಡ ಆ ಬಾಲಿಕೆಯನ್ನು ಕರೆದುಕೊಂಡು ಬರುತ್ತಿದ್ದರು. ಆ ಬಾಲಿಕೆಯು ಬೆಳೆದು ದೊಡ್ಡವಳಾದ ಮೇಲೆ ಒಬ್ಬ ಸರದಾರನು ಆವಳನ್ನು

ಮೋಹಿಸಿ ಬಲಾತ್ಕಾರದಿಂದ ತರಬೇಕೆಂದು ವಿಚಾರಮಾಡಿದನು. ಈ ಸುದ್ದಿಯು ತಿಳಿದ ಕೂಡಲೆ ಖಾದರಿಯವರು ಆಕಾಶಮಾರ್ಗವಾಗಿ ಹುಳ್ಳೀ ಕೊಪ್ಪಿಯನ್ನು ಬಿಟ್ಟು ಹುಲಗೂರ ಹತ್ತಿರ ದರ್ಗಾಕ್ಕೆ ಬಂದು ಅಲ್ಲಿ ವಾಸಿಸಹತ್ತಿದರು. ಇವರು ಹುಲಗೂರಿಗೆ ಭಿಕ್ಷೆ ಬೇಡಲು ಬಂದಾಗ ಯಾವಾಗಲು ಒಂದು ಕಟ್ಟೆಯ ಮೇಲೆ ಕೂಡುತ್ತಿದ್ದರು. ಈ ಕಟ್ಟೆಯನ್ನು ಈಗಲೂ ಪೂಜಿಸುತ್ತಾರೆ.

ಈ ಅಧ್ಯಾತ್ಮಿಕ ದೃಷ್ಟಿಯಿಂದಷ್ಟೇ ಹುಲಗೂರ ಉರುಸು ಪ್ರಸಿದ್ಧಿಗೆ ಬರಲಿಕ್ಕೆ ಕಾರಣವಲ್ಲ, ಇನ್ನಿತರ ಕಾರಣಗಳೂ ಉಂಟು. ಹುಲಗೂರ ಉರುಸು ಸುಮಾರು ಒಂದು ತಿಂಗಳವರೆಗೆ ನಡೆಯುತ್ತದೆ. ಇಲ್ಲಿ ಎತ್ತಿನ ದೊಡ್ಡ ಜಾತ್ರೆಯಾಗುತ್ತದೆ. ಎಲ್ಲ ಕಡೆಯಿಂದಲೂ ಜನರು ಎತ್ತು ಕೊಂಡುಕೊಳ್ಳಲಿಕ್ಕೆ ಬರುವದುಂಟು. ವ್ಯಾಪಾರಸ್ಥರಿಗೆ ಇದು ಬಹಳ ದೊಡ್ಡ ಹಬ್ಬ. ನಮಗೆ ಗೊತ್ತಿದ್ದ ಒಬ್ಬ ಸೆಟ್ಟರು ಆಗ ತಮ್ಮಲ್ಲಿ ಸುಮಾರು ೫೦೦ ಚೀಲ ಮಗದಮ್ ಸಕ್ಕರೆಯು ಖರ್ಚಾಗುವದೆಂದು ಹೇಳುತ್ತಿದ್ದರು. ಇದಲ್ಲದೆ ಹೋಟಲು, ನಾಟಕ, ಸಿನೆಮಾ, ಸರ್ಕಸ್ಸುಗಳಂತೂ ಇವೇ ಇವೆ.

ಸರೀಫಸಾಹೇಬರು ಇತ್ತಲಿನ ಮತ್ತೊಬ್ಬ ಮುಸಲ್ಮಾನ್ ಸತ್ಪುರುಷರು. ಅವರು ಕಳಸದ ಗೋವಿಂದಭಟ್ಟರ ಕೇವಲ ಶಿಷ್ಯರು. ಅವರು ಜಾತಿಯಿಂದ ಮುಸಲ್ಮಾನರಿದ್ದರೂ ಶುದ್ಧಾದ್ವೈತ ಅನುಭವಿಗಳಾಗಿದ್ದರು. ಮತ್ತು ಅವರು ತಮ್ಮ ಪದಗಳಲ್ಲಿ ವೇದೋಪನಿಷತ್ತುಗಳನ್ನು ಸೂರೆ ಮಾಡಿದ್ದಾರೆ. ಗೋವಿಂದಭಟ್ಟರು, ಸರೀಫಸಾಹೇಬ ಮೊದಲಾದವರ ಒಂದು ತಂಡವೇ ಇತ್ತು. ಅವರು ದ್ಯಾಮವ್ವನ ಭಜನೆ ಮಾಡುತ್ತಿದ್ದರು. ಅವರಲ್ಲಿ ಸರೀಫ ಸಾಹೇಬರು ತಮ್ಮ ಬಹುತರ ವೇಳೆಯನ್ನು ಹುಲಗೂರಿನಲ್ಲಿಯೇ ಕಳೆಯುತ್ತಿದ್ದರು. ಅವರನ್ನು ನೋಡಿದ ಜನರು ಅನೇಕರಿದ್ದಾರೆ. ಅವರಿಗೆ ಹಾದಿ ಗುಂಟ ಪದಗಳನ್ನು ಅನ್ನುತ್ತ ಹೋಗುವ ಸ್ವಭಾವ. ಯಾರಾದರೂ ಅವನ್ನು ಬರೆದುಕೊಳ್ಳುತ್ತಿದ್ದರು. ತಾವಾಗಿ ಎಂದೂ ಬರೆಯಲಿಲ್ಲವಂತೆ. ಅವರ ವಿಷಯವಾಗಿ ಅನೇಕ ಕತೆಗಳನ್ನು ಹೇಳುವದುಂಟು. ಒಂದು ಸಾರೆ ಅವರು ಹುಲಗೂರಿನಲ್ಲಿ ಬಂದಾಗ ಯಾವಳೋ ಒಬ್ಬ ಹೆಣ್ಣು ಮಗಳು ಬೇನೆ ತಿನ್ನುತ್ತಿದ್ದು ಮೂರು ದಿನವಾದರೂ ಪ್ರಸೂತವಾಗಲಿಲ್ಲ. ಮನೆ

ಯಲ್ಲೆಲ್ಲ ಹಾಹಾಕಾರವೆದ್ದಿತು. ಇದು ಸರೀಫಸಾಹೇಬರಿಗೆ ಗೊತ್ತಾದ ಕೂಡಲೆ ಅವರು ಊರ ಹೊರಗಿನ ಒಂದು ಬಂಡೆಗಲ್ಲನ್ನು ತಿರುವಿ ಹಾಕಲು ಹೇಳಿದರು. ಅದರಂತೆ ಮಾಡಿ ಬರುವದರೊಳಗಾಗಿಯೇ ಮನೆಯಲ್ಲಿ ಹೆರಿಗೆಯಾಗಿತ್ತಂತೆ. ಅವರು ಎಷ್ಟೋ ಸಾರಿ ಕೊಟ್ಟ ಶಾಪಗಳು ಸತ್ಯ ವಾಗಿ ಪರಿಣಮಿಸಿದವು.

ಇನ್ನೊಂದು ಪ್ರಸಂಗದಲ್ಲಿ ಇವರ ಗುರುಗಳಾದ ಕಳಸದ ಗೋವಿಂದ ಭಟ್ಟರಿಗೆ ಬಹಳ ಜಡ್ಡಾಗಿತ್ತು. ಮೈಗೆಲ್ಲ ಹುಣ್ಣಾಗಿದ್ದವಂತೆ. ಅವರ ಪರಾಮರಿಕೆಯನ್ನು ಸರೀಫಸಾಹೇಬರೇ ಮಾಡುತ್ತಿದ್ದರು. ಗೋವಿಂದ ಭಟ್ಟರು ಈ ತರದ ಜಡ್ಡಿನಲ್ಲಿ ತಮಗೆ ಕೇವಲ ಶಿಷ್ಯರಾಗಿ ಯಾರು ಉಳಿಯು ವರೋ ನೋಡಬೇಕೆಂದು ಅವರು ಈ ಪವಾಡ ಮಾಡಿದಂತೆ ಕಂಡು ಬರು ತ್ತದೆ. ಹೀಗೆ ಕೆಲವು ದಿವಸಗಳು ಉರುಳಲು ಒಂದು ದಿವಸ ಮಧ್ಯಾಹ್ನ ಸರೀಫಸಾಹೇಬರು ಮನೆಗೆ ಬಂದರು. ಅವರ ತಾಯಿಯು ಜಳಕ ಮಾಡಿ ಊಟ ಮಾಡಲಿಕ್ಕೆ ಹೇಳಿದರು. ಸರೀಫಸಾಹೇಬರು ತಮಗೆ ಮೈಯಲ್ಲಿ ಏಕೋ ಸ್ವಸ್ಥವಿಲ್ಲೆಂದು ಅತ್ತಿಂದಿತ್ತ ತಿರುಗಾಡಹತ್ತಿದರು. ಅವರಿಗೆ ಗುರು ಗಳ ದರ್ಶನವನ್ನು ತೆಗೆದುಕೊಂಡು ಬಂದರೇ ತಮಗೆ ಶಾಂತವಾಗುವ ದೆಂದು ಅನಿಸಿದ್ದರಿಂದ ಅವರು ಊಟ ಮಾಡದೆ ನೆಟ್ಟಗೆ ಕಳಸಕ್ಕೆ ತೆರಳಿ ದರು. ಅಲ್ಲಿ ಹೋಗಿ ನೋಡುತ್ತಾರೆ, ಗುರುಗಳಿಗೆ ಬಹಳ ಜೇರಾಗಿದೆ. ತಾವು ಬಂದದ್ದನ್ನು ಗುರುಗಳಿಗೆ ತಿಳಿಸಲಾಗಿ ಗುರುಗಳು ಸಾಹೇಬರಿಗೆ ಕೈ ಒಡ್ಡಲು ಆಜ್ಞೆ ಮಾಡಿದರು. ಅದರಂತೆ ಸರೀಫರು ಬೊಗಸೆಯೊಡ್ಡಲು ಗುರುಗಳು ಬೊಗಸೆಯಲ್ಲಿ ವಾಂತಿಮಾಡಿದರು. ಹಾಗೂ ಅದನ್ನು ಪ್ರಸಾದ ದಂತೆ ಸ್ವೀಕರಿಸಲಿಕ್ಕೆ ಸರೀಫರಿಗೆ ಹೇಳಿದರಂತೆ. ಕೂಡಿದ ಜನರಿಗೆ ಅದು ಕಾರಿಕೆ ಎಂದು ಕಂಡರೂ ಅದು ಸರೀಫರಿಗೆ ಹಾಲಿನಂತೆ ಕಂಡಿತು. ಅವರು ಅದನ್ನು ಕುಡಿದರು ಮತ್ತು ಅಂದಿನಿಂದ ಗೋವಿಂದಭಟ್ಟರ ಕೇವಲ ಶಿಷ್ಯರಲ್ಲಿ ಅವರ ಎಣಿಕೆಯಾಯಿತು.

ಶಿಶುನಾಳ ಊರಿನಹತ್ತಿರವೇ ಒಂದು ದಿನ್ನೆ ಇದೆ. ಅದು ಸರೀಫರಸ್ಥಾನ. ಅಲ್ಲಿಯೇ ಮಲಕೊಳ್ಳುವದು, ಕೂಡುವದು, ಕುಡಿಯುವದು ನಡೆಯುತ್ತಿದ್ದವು. ಅವರು ಅಲ್ಲಿ ಎರಡು ಬೇವಿನ ಸಸಿಗಳನ್ನು ಹತ್ತಿರದಲ್ಲೇ ಹಚ್ಚಿ ನಡುವೆ

ಒಂದು ಕಲ್ಲು ಇಟ್ಟಿದ್ದರು ಮತ್ತು ಅವೆರಡು ಸಸಿಗಳು ಎಂದು ಕೂಡುವವೋ ಅಂದು ತಾವು ಸಾಯುವವರೆಂದು ಹೇಳಿದ್ದರು. ತಾವಿರುವಾಗಲೇ ಅವರು ಹೇಳಿದಂತೆ ಆ ಗಿಡಗಳು ಕೂಡಿದಂವೇ ಅವರು ಸತ್ತರಂತೆ. ಆ ಬೇವಿನ ಬಳ್ಳಿಯು ಕಪ್ಪಲಿ ಹೊಡೆಯುವ ಹಗ್ಗದಷ್ಟು ಗಡುತರವಾದ ಬೊಡ್ಡೆಯಿಂದ ಇಡೀ ಗಿಡವನ್ನೆಲ್ಲ ವ್ಯಾಪಿಸಿದೆ. ಅದರ ಕೆಳದಲ್ಲಿಯೇ ಸರೀಫಸಾಹೇಬ ಮತ್ತು ಅವರ ತಾಯಿಯ ಗದ್ದಿಗೆ. ವಿಶೇಷವಾಗಿ ಅವರು ಹಿಂದೂ ಧರ್ಮ ವನ್ನು ಅನುಸರಿಸಿದ್ದರಿಂದ ಗದ್ದಿಗೆಯನ್ನು ಕಟ್ಟಲಾಯಿತು. ಅವರು ಗಡ್ಡ ವನ್ನು ಎಂದೂ ಬಿಡಲಿಲ್ಲ. ಹುಲಗೂರಿನ ಆಜುಬಾಜುವಿದ್ದ ಈ ಎರಡೂ ಸ್ಥಾನಗಳು ಬಹಳ ರಮಣೀಯವಾಗಿವೆ. ಮೊದಲೇ ರಮಣೀಯವಾದ ಪ್ರದೇಶಗಳ ಮೇಲೆ ಸತ್ಪುರುಷರ ಹೆಜ್ಜೆಗಳು ಮೂಡಿದ ಮೇಲೆ ಕೇಳುವದೇನು?

ಇಂದು ಜಾತಿಯ ದುರಭಿಮಾನವು ಹಳ್ಳಿಹಳ್ಳಿಗೂ ಕೂಡ ಕಾಲು ಚಾಚಹತ್ತಿದೆ. ಆದರೂ ಹುಲಗೂರು ಈ ಜಾತಿದ್ವೇಷದಿಂದ ಮುಕ್ತವಾಗಿದೆ. ಯಾವದಾದರೊಂದು ಸಾರ್ವಜನಿಕ ಸಮಾರಂಭವಾಗಲಿ, ವೀರಶೈವ ಅಥವಾ ಮುಸಲ್ಮಾನರ ಸಮಾರಂಭಗಳಾಗಲಿ ಇಡೀ ಊರೇ ಬಂದು ಕೈಲಾದಷ್ಟು ಸಹಾಯ ಮಾಡುತ್ತದೆ. ಬ್ರಾಹ್ಮಣ, ಲಿಂಗಾಯತ ಎಂಬ ಭೇದಭಾವವಿಲ್ಲ. ಲಿಂಗಾಯತ ಮುಸಲ್ಮಾನ ಎಂದೂ ಇಲ್ಲ. ಪ್ರತಿ ಗುರುವಾರ ಎಲ್ಲ ಜಾತಿಯ ಜನರೂ ಸಕ್ಕರೆ 'ಓದಿಸ'ಲಿಕ್ಕೆ ದರ್ಗಾಕ್ಕೆ ಹೋಗುತ್ತಾರೆ. ಬ್ರಾಹ್ಮಣ ರಲ್ಲಿ ತುಳಸೀ ಪೂಜೆಯಾದರೆ ಲಿಂಗಾಯತರು ಬರುತ್ತಾರೆ. ಲಿಂಗಾಯತ ರಲ್ಲಿ ಕಾರಣವಾದರೆ ಬ್ರಾಹ್ಮಣರು ಹೋಗುತ್ತಾರೆ. ಈ ತರಹದ ಜಾತೀಯ ಐಕ್ಯವನ್ನು ನಾವು ಹುಲಗೂರಿನಲ್ಲಿ ಕಾಣಬಹುದು.

ಹತ್ತಿರದಲ್ಲಿ ಸಾಧು ಸತ್ಪುರುಷರು ಹುಟ್ಟಿದರೂ, ಸರೀಫರಂಥವರು ತಮ್ಮ ಕಂಠದಿಂದ ಹಾಡು ಪದಗಳ ಸುರಿಮಳೆಯನ್ನು ಮಾಡಿದರೂ ಅಲ್ಲಿಯ ಜನರಿಗೆ ವಿದ್ಯಾಭಿರುಚಿಯು ಇನ್ನೂ ಹತ್ತಿಲ್ಲವೆಂದೆ ಹೇಳಬೇಕು. ಕೆಲವು ವರುಷಗಳ ಹಿಂದೆ ಕಾಂಗ್ರೆಸ್ ಚಳವಳಿ ಸುರುವಾಗಿ ಒಂದು ಸಂಘವು ಸ್ಥಾಪಿಸಲ್ಪಟ್ಟಿತು. ಅಲ್ಲಿ ಕೆಲವು ಪುಸ್ತಕಗಳೂ ಕೆಲವು ವರ್ತಮಾನಪತ್ರ ಗಳೂ ಬರುತ್ತಿದ್ದವು. ಆದರೆ ಈಗ ಅದು ಮಣ್ಣುಗೂಡಿಹೋಗಿದೆ. ಆ ಊರಿನ ಪ್ರಸಿದ್ಧ ಗೌಡರಾದ ನಾಗನಗೌಡರಿದ್ದಾಗ ಅವರು ಒಂದು ನಾಟಕ

ಮಂಡಳಿಯನ್ನು ಸ್ಥಾಪಿಸಿದರು. ಈ ರೀತಿಯಿಂದ ನಾಟಕದ ಅಭಿರುಚಿಯಾದರೂ ಹುಲಗೂರವರಿಗೆ ಹತ್ತಿತು. ಆದರೆ ಅವರು ತೀರಿಕೊಂಡ ನಂತರ ಮಂಡಳಿಯು ಈಗ ಕುಂಟುತ್ತ ಕೂರುತ್ತ ನಡೆದಿದೆ. ಏಳನೇ ಇಯತ್ತೆಯ ವರೆಗೆ ಶಾಲೆಯಿದ್ದರೂ ಒಟ್ಟು ಶಾಲೆಯ ಹುಡುಗರ ಸಂಖ್ಯೆ ೧೨೦ಕ್ಕೆ ಮಿಕ್ಕಿಲ್ಲ. ಆ ಶಾಲೆಗೆ ಮೊದಲು ನಾಲ್ಕು ಮಂದಿ ಮಾಸ್ತರರಿದ್ದು ಈಗ ಮೂರು ಮಂದಿ ಆಗಿದ್ದಾರೆ.

ವಿದ್ಯಾಭಿರುಚಿ ಅಷ್ಟು ಇಲ್ಲದಿದ್ದರೂ ಊರಿನ ಜನರಿಗೆ ಹುರುಪು ಬಹಳ. ಕೆಲವು ವರುಷಗಳ ಹಿಂದೆ ಊರ ಜನರೆಲ್ಲ ಕೂಡಿ ಪಟ್ಟಿ ಹಾಕಿ ಒಂದು ದೊಡ್ಡ ಗಾಳೀ ಪಟವನ್ನು ಮಾಡಿದರು. ಅದು ಸುಮಾರು ೯ ಫೂಟು ಎತ್ತರ ೪-೫ ಫೂಟು ಅಗಲವಿತ್ತು. ಅದನ್ನು ಚಾಪೆಯಿಂದ ಮಾಡಿದ್ದರು. ಅದಕ್ಕೆ ದಾರದ ಬದಲಾಗಿ ಒಂದು ಹಗ್ಗವನ್ನು ಹಚ್ಚಿ ಅದಕ್ಕೆ ಮತ್ತೆ ಏಳೆಂಟು ಹಗ್ಗಗಳನ್ನು ಗಂಟು ಹಾಕಿದ್ದರು. ಅದನ್ನು ಒಂದು ದೊಡ್ಡ ಮೈದಾನದ ಮೇಲೆ ಹಾರಿಸಲಿಕ್ಕೆ ಸಾಹಸ ಮಾಡಿದರು. ಆದರೆ ಅದು ಅಷ್ಟೇನೂ ಯಶಸ್ವಿಯಾಗಲಿಲ್ಲವೆಂದೇ ಹೇಳಬೇಕು.

ನಾನು ಹುಲಗೂರಿನಲ್ಲಿ ಜಾತ್ರೆಯಾಗುತ್ತದೆಂಬುದನ್ನು ಆಗಲೇ ಹೇಳಿದ್ದೇನೆ. ಬಸವಣ್ಣದೇವರಿಗೆ ತೇರುಕಟ್ಟಿ ಅದರ ಮೇಲೆ ಚಂದ್ರಶೇಖರಯ್ಯನವರನ್ನು ಕೂಡಿಸಿ ಜನರು ತೇರನ್ನು ಉತ್ಸುಕತೆಯಿಂದ ೨ ಫರ್ಲಾಂಗಿನವರೆಗೆ ಎಳೆಯುತ್ತಾರೆ. ಆ ತೇರಿಗೆ ಜನರು ಬೆಲ್ಲ, ಬಾಳೆಹಣ್ಣು, ಮಾವಿನ ಹಣ್ಣು ಮತ್ತು ಇತರ ಹಣ್ಣುಗಳನ್ನು ಒಗೆಯುವದುಂಟು. ಆ ತೇರಿನ ಮೇಲೆ ಚೌಕಾಸನ ಹಾಕಿಕೊಂಡು ಕೂತು ಹೊಡಿಸಿಕೊಳ್ಳುವ ಅಯ್ಯನವರ ಸ್ಥಿತಿ ನೋಡಲಾಸಲ್ಲ. ಅನೇಕ ಹುಡುಗರು ತಮತಮಗೆ ಮನಬಂದಂತೆ ಗುರಿಯಿಟ್ಟು ಹಣ್ಣುಗಳನ್ನು ಎಸೆಯುತ್ತಾರೆ. ಹುಲಗೂರಿನಲ್ಲಿ ಇದು ಒಂದು ವಿನೋದದ ವಿಷಯ.

ಹುಲಗೂರು ಈ ಶಬ್ದವು ಹೇಗೆ ಬಂದಿತೆಂಬುದು ಗೊತ್ತಿಲ್ಲ. ಹುಲಗನ ಊರು ಇಲ್ಲವೆ ಹುಲಗಲಿಯೂರು ಎಂದು ಬಂದಿರಬಹುದು. ಹಿಂದಿನ ಕಾಲಕ್ಕೆ ಇದಕ್ಕೆ ಮತ್ತೆ ಬೇರೆ ಹೆಸರು ಇದ್ದಿರಲಿಕ್ಕೂ ಸಾಕು. ಟೀಪೂ ಸುಲ್ತಾನನ ಕಾಲಕ್ಕೆ ಇಲ್ಲಿ ಬಹು ದೊಡ್ಡ ಕಾಳಗವಾಯಿತೆಂಬುದು ಇಲ್ಲಿ

ಒಡೆದುಬಿದ್ದ ಗುಡಿಗಳಿಂದಲೂ, ವಿಗ್ರಹಗಳಿಂದಲೂ, ಕಟ್ಟಡಗಳಿಂದಲೂ ಕಂಡುಬರುವದು. ಟೀಪುವಿನನ್ನು ಎದುರಿಸಲಿಕ್ಕೆ ದಂಡುಗಳು ಹುಲಗೂರ ಮೇಲಿಂದ ಹಾಯಿದು ಬಂಕಾಪುರಕ್ಕೆ ಹೋದವೆಂದು ತರ್ಕ ಮಾಡಬಹುದಾಗಿದೆ. ಹುಲಗೂರಿನಲ್ಲಿ ಅನೇಕ ಗುಡಿಗಳು ಮಣ್ಣು ಪಾಲಾಗಿವೆ. ಕೆಲವು ಅಸ್ತವ್ಯಸ್ತವಾಗಿ ಬಿದ್ದಿವೆ. ಲಕ್ಷ್ಮೀ ವಿಗ್ರಹವುಳ್ಳ ಕೆಲವು ಶಿಲಾ ಸ್ತಂಭಗಳನ್ನು ಇಲ್ಲಿ ಕಾಣುತ್ತೇವೆ. ಇದರಿಂದ ಜಕಣಾಚಾರ್ಯರ ಕಟ್ಟಡದ ಕೆಲವು ಗುಡಿಗಳಿದ್ದವೆಂದು ತರ್ಕಮಾಡುವ ಹಾಗಿದೆ. ಇದಲ್ಲದೆ ಅಲ್ಲಲ್ಲಿ ಅನೇಕ ಶಿಲಾಲಿಪಿಗಳು ಕಂಡುಬರುವವು. ಕೆಲವುಗಳ ಮೇಲೆ ಎಣ್ಣೆ ಹೊಯ್ದುದ್ದರಿಂದ ಈಗಾಗಲೇ ಅವು ದೇವರೆಂದು ಎಣಿಸಲಾಗಿವೆ. ಸಂಶೋಧಕರು ಇತ್ತ ಕಡೆಗೆ ಗಮನಿಸುವದು ಯೋಗ್ಯವೆಂದು ತೋರುತ್ತದೆ.

—ರಾ. ಬಾ. ಲಕ್ಷ್ಮೇಶ್ವರ

---

# ಬೆಳಗಾವಿ

ಬೆಳಗಾವಿಯ ಹತ್ತಿರ ಬಾಳೆಕುಂದ್ರಿಯೆಂದು ಒಂದು ಹಳ್ಳಿಯಿದೆ. ಅಲ್ಲಿ ಪಂತರೆಂಬ ಸತ್ಪುರುಷರೊಬ್ಬರು ಆಗಿಹೋದರು. ಅನೇಕ ವರ್ಷಗಳ ವರೆಗೆ ಅವರು ಬೆಳಗಾವಿಯಲ್ಲಿಯೇ ವಾಸಮಾಡಿದ್ದರು. ಪಾರಿಶವಾಡದ ಬಾಳಪ್ಪನವರು ಅವರ ಗುರುಗಳು. ಇವರು ಅಚ್ಚಕನ್ನಡಿಗರು. ಬಾಳಪ್ಪನವರ ಪದಗಳೂ ಪರಂಪರೆಯಿಂದ ಉಳಿದು ಬಂದಿವೆ. ಅವೆಲ್ಲ ಕನ್ನಡದಲ್ಲಿ. 'ಓಂ ನಮಶ್ಶಿವಾಯ' ಎಂಬ ಹೆಸರಿನ ಅವರ ಶಿಷ್ಯರೊಬ್ಬರು ಮೊನ್ನೆ ಮೊನ್ನೆಯ ವರೆಗೆ ಜೀವಿಸಿದ್ದರು. ಅವರೂ ಕನ್ನಡಿಗರೆ.

ಸ್ವತಃ ಪಂತರೂ ಕನ್ನಡಿಗರೆ. ಅವರ ತಾಯಿ ಮನೆಯಲ್ಲಿ ಕನ್ನಡವನ್ನು ಮಾತನಾಡುತ್ತಿದ್ದರು. ಪಂತರು ತಮ್ಮ ತಮ್ಮಂದಿರೊಡನೆ ಕನ್ನಡದಲ್ಲಿಯೇ ಸಂಭಾಷಣೆ ನಡೆಸುತ್ತಿದ್ದರು. ಬೆಳಗಾವಿಯಲ್ಲಿ ಕೆಲವು ವರ್ಷ

ಅವರು ಶಿಕ್ಷಕರಾಗಿದ್ದರು. ಆಗ ಮೊಟ್ಟಮೊದಲು ಅವರಿಂದ ಹೊರ ಹೊಮ್ಮಿದ ೩೦–೪೦ ಪದಗಳು ಕನ್ನಡದಲ್ಲಿಯೇ ಇವೆ. ಆದರೆ ಮುಂದೆ ಪಂತರ ಸುತ್ತಲು ಮರಾಠಿಗರ ಭಕ್ತವೃಂದವು ಬೆಳೆದಾಗ ಅವರ ಪದಗಳೆಲ್ಲ ಮರಾಠಿಯಾದವು. ಅವರು ಬರೆದ ಅನೇಕ ಗ್ರಂಥಗಳು ಮರಾಠಿಯನ್ನೇ ಆಶ್ರಯಿಸಿದವು. ಇದೀಗ ಅವರ ಹೆಸರಿನಲ್ಲಿ ಸ್ಥಾಪಿತವಾದ ದತ್ತಸಂಸ್ಥೆಯ ವ್ಯವಹಾರವೆಲ್ಲ ಮರಾಠಿಯಲ್ಲಿದೆ. ಮರಾಠಿಯಲ್ಲಿ ಅದೊಂದು ಪಂತರ ವಾಙ್ಮಯವೇ ಬೆಳೆದು ಬಂದಿದೆ.

ಇದರ ಉಳಿದ ರೀತಿಗಳೇನೆ ಇರಲಿ ; ಭಾಷೆಯ ಪಲ್ಲಟದ ಉದಾಹರಣೆಯೆಂದು ಪಂತರ ವಿಷಯವನ್ನು ಇಲ್ಲಿ ಎತ್ತಿದ್ದೇನೆ. ಎಲ್ಲಕ್ಕೂ ಮೊಟ್ಟಮೊದಲು ಕನ್ನಡ ಟ್ರೇನಿಂಗ್ ಕಾಲೇಜು ಬೆಳಗಾವಿಯಲ್ಲಿತ್ತಂತೆ. ಹೊಸನುಡಿಗಟ್ಟನ್ನು ಬರೆದ ಪಂಡಿತ ಮುಳಬಾಗಲರು ಬೆಳಗಾವಿಯವರಂತೆ. ಹೀಗೆ ಅಚ್ಚಗನ್ನಡ ಪಟ್ಟಣವಾದ ಬೆಳಗಾವಿಯಲ್ಲಿ ಮರಾಠಿ ವಾತಾವರಣವು ಇಷ್ಟೊಂದಾಗಿ ಬೆಳೆದು ಬಂದದ್ದು ಹೇಗೆ ?

ಉತ್ತರವೇನೋ ಸುಲಭವಿದೆ. ಬೆಳಗಾವಿಯ ಮಗ್ಗುಲಲ್ಲಿಯ ಅಚ್ಚಗನ್ನಡದ ಹಿರಿಯೂರಾದ ಶಹಪುರವು ಇನ್ನೂ ಸಾಂಗಲಿ ಸಂಸ್ಥಾನದ ಮರಾಠಿಮಯ ಆಳಿಕೆಯಲ್ಲಿ ತನ್ನತನವನ್ನು ಕಂಡುಕೊಂಡಿಲ್ಲ. ಮೊನ್ನೆ ಮೊನ್ನೆ ಮಾನ್ಯ ಮಹಿಷಿಯವರ ನೇತೃತ್ವದಲ್ಲಿ ಅದು ಕನ್ನಡ ಸಾಲೆಯನ್ನು ಕಂಡಿತು. 'ಅಂಬೋಲಿ'ಯ ಮಾರ್ಗದ ಕೊಂಕಣಪಟ್ಟಿಗೆ ಸಮೀಪದಲ್ಲಿಯ ದೊಡ್ಡ ಪಟ್ಟಣವೆಂದರೆ ಬೆಳಗಾವಿ. ಆ ಪಟ್ಟಿಯಲ್ಲಿಯ ಸ್ಥಿತಿವಂತ ಮಹಾರಾಷ್ಟ್ರೀಯರನೇಕರು ಬಂದು ಬೆಳಗಾವಿಯಲ್ಲಿ ವಾಸಿಸಿದರು. ಬೆಳಗಾವಿಯಲ್ಲಿ ಹುಟ್ಟಿ ಬೆಳೆದ ಕರ್ನಾಟಕದ ಧುರೀಣರನೇಕರು ಆ ಊರ ಕನ್ನಡತನವನ್ನು ಕಾಯಲಿಲ್ಲ. ಇಷ್ಟೇ ಏಕೆ, ಅಲ್ಲಿ ಮರಾಠಿಯ ವರ್ಚಸ್ಸನ್ನು ಬೆಳೆಸಲು ಕಾರಣರಾದರು. ಮುಂಬೈ ಕಡೆಗೆ ಮೋರೆ ಮಾಡಿ ಪ್ರಗತಿಪರವಾಗುತ್ತಿರುವ ಇಲಾಖೆಯೆಲ್ಲ ಬೆಳಗಾವಿಯ ಸಂಬಂಧವು ಕರ್ನಾಟಕದ ಉಳಿದ ಭಾಗಗಳಿಗಿಂತ ಪುಣೆಯೊಡನೆ ಹೆಚ್ಚಾಗಿ ಬರುವಂತೆ ಮಾಡಿತು. ಹೀಗೆ ವಿವಿಧ ಕಾರಣಗಳಿಂದ ಬೆಳಗಾವಿಯಲ್ಲಿ ಮರಾಠಿಗೆ ಪ್ರಾಶಸ್ತ್ಯವು ದೊರೆಕಿತು. ಸರಕಾರಿ ನೌಕರಿಗಳಲ್ಲಿ ಮೊದಲು ಕನ್ನಡಿಗರ ಸಂಖ್ಯೆಗಿಂತ

ಉಳಿದವರದು ಹೆಚ್ಚಾಗಿತ್ತೆಂಬುದು ಎಲ್ಲರಿಗೂ ಗೊತ್ತಿದ್ದ ಮಾತು. ಇಂಥ ನೌಕರಿಗಳಲ್ಲಿದ್ದವರು ನಿವೃತ್ತರಾದ ಮೇಲೆ ಯಾವ ಊರಲ್ಲಿರಬೇಕು? ಬೆಳಗಾವಿ! ಬೆಳಗಾವಿಯ ಕೋಟೆ, ಅದರ 'ಮಹಬಳೇಶ್ವರ'ತನ, ಭತ್ತದ ಬೆಳೆ, ಕೇಬೀಜ—ನವಲುಕೋಲಿನ ಸಮೃದ್ಧಿ, ಧಾರವಾಡಕ್ಕಿಂತ ಮುಂಬೈಗೆ ಅದು ಹೆಚ್ಚು ಸಮೀಪವಾಗಿರುವದು---ಇವೆಲ್ಲ ಕಾರಣಗಳ ಮೂಲಕ ಪೆನ್‌ಶನ್ ಜನರು ಉಳ್ಳೆಂದು ಬೆಳಗಾವಿಯಲ್ಲಿಯೇ ತಳವೂರಿದರು. ಅವರ ಪ್ರಭಾವದಿಂದ ಠಳಕವಾಡಿಯು ಜನ್ಮವೆತ್ತಿತು.

ಇನ್ನು ನಮ್ಮ ಜನರ ಅಜ್ಞಾನವನ್ನೆಲ್ಲ ಇದಕ್ಕೆ ಮೇಲೋಗರ ಹಾಕಿರಿ. 'ಪೇಶ್ವಾಯಿ'ಯ ಅವಶೇಷಗಳನ್ನು ಕೂಡಿಸಿರಿ. ಅಂಗಡಿಕಾರರು ಲೆಕ್ಕಪತ್ರಗಳಿಗಾಗಿ ಅನೇಕ ವರ್ಷಗಳಿಂದ ಆ ಬ್ರಹ್ಮಲಿಪಿಯಾದ ಮೋಡಿಯನ್ನು ಉಪಯೋಗಿಸುತ್ತ ಬಂದುದನ್ನು ನೆನೆಯಿರಿ. ಆಗ ನಿಮಗೆ ಗೊತ್ತಾಗಬಹುದು,—ಬೆಳಗಾವಿಯ ತುಂಬ ಮರಾಠಿ ಬೋರ್ಡುಗಳೇಕೆ ಕಾಣುತ್ತಿದ್ದುವು, ಇನ್ನೂ ಹಲವು ಕಡೆಗೇಕೆ ಕಾಣುತ್ತಿರುವವೆಂಬುದರ ರಹಸ್ಯ!

ಅಲ್ಲದೆ ಮಹಾರಾಷ್ಟ್ರೀಯರಲ್ಲಿದ್ದ ಫಡಣವೀಸಗಿರಿ, ದಿಟ್ಟತನ, ಧೂರ್ತತನ—ಇವೆಲ್ಲ ಗುಣಗಳು ನಮ್ಮ ಜನರಲ್ಲಿ ಸರ್ವಸಾಧಾರಣವಾಗಿ ಅಷ್ಟೊಂದಾಗಿ ಒಡೆದು ಕಾಣುವದಿಲ್ಲ. ಇದಕ್ಕೆ ಅವರ ಉದಾಸೀನತೆಯೋ ದೊಡ್ಡಸ್ತಿಕೆಯೋ ಕಾರಣವಿರಬೇಕು. ಒಂದೇ ಒಂದು ಉದಾಹರಣೆಯನ್ನು ತೆಗೆದುಕೊಳ್ಳುವಾ. ಮೊನ್ನೆ ಮೊನ್ನೆ ಬೆಳಗಾವಿಯಲ್ಲಿ ಬಿ. ಟಿ. ಕಾಲೇಜಿನ ಉದ್ಘಾಟನ ಸಮಾರಂಭವು ಮಾನ್ಯ ಲಕ್ಮೆಯವರ ಹಸ್ತದಿಂದ ಜರುಗಿತು. ಕಾಲೇಜಿನ ಒಂದು ಗೇಟಿನ ಮೇಲೆ 'ಅಪ್ಪಣೆಯಿಲ್ಲದೆ ಒಳಗೆ ಬರಬಾರದು' ಎಂಬ ಬರೆಹವನ್ನು ಕನ್ನಡ, ಇಂಗ್ಲಿಷು ಹಾಗು ಮರಾಠಿ ಭಾಷೆಗಳಲ್ಲಿ ಕಾಣಿಸಿದ್ದರು. ಸಮಾರಂಭದ ಮುಂಜಾವಿನಲ್ಲಿ ಯಾರೋ ಆ ಕನ್ನಡವನ್ನು ತೊಡೆದು ಹಾಕಿಬಿಟ್ಟಿದ್ದರು,—ಅದರ ಮೇಲೆ ದಪ್ಪವಾಗಿ ಡಾಂಬರಿನ ಗೆರೆಯೆಳೆದಿದ್ದರು. ಉಳಿದ ಭಾಷೆಗಳಲ್ಲಿಯ ಬರೆಹಗಳು ಮಾತ್ರ ಕಾಣಿಸಿಕೊಳ್ಳುತ್ತಿದ್ದವು.

ಇದರ ಮುಂದೇನಾಯಿತೆಂದು ವಾಚಕರು ಕೇಳುವರೊ? ಡಾಂಬರು ಹಾಗೆಯೇ ಉಳಿಯಿತು. ಉಳಿದ ಬರೆಹಗಳು ಹಾಗೆಯೇ ಉಳಿದವು. ಕನ್ನಡದ ಮೋರೆಗೆ ಡಾಂಬರವನ್ನು ಕೊಟ್ಟೇ ಸಮಾರಂಭವು ಮುಂದೆಸಾಗಿತು.

ಇಂತಹ ಉದಾಹರಣೆಗಳು ಲೆಕ್ಕವಿಲ್ಲದಷ್ಟು ದೊರೆಯುವ ಊರೆಂದರೇ ಬೆಳಗಾವಿ. ನನ್ನ ಮರಾಠಿ ಸ್ನೇಹಿತರೊಬ್ಬರು ಕೇಳುತ್ತಿದ್ದರು: '....ರು ಕನ್ನಡಿಗರು ನೋಡಿರಿ! ಆದರೆ ವಕೀಲರ ಸಂಘದಲ್ಲಿ ಬೆಳಗಾವಿಯು ಮಹ ರಾಷ್ಟ್ರಕ್ಕೆ ಸೇರಬೇಕೆಂದೇ ಅವರು ತಮ್ಮ ಮತ ಕೊಟ್ಟರು. ನೀವು ಬೆಳಗಾವಿಯು ಕರ್ನಾಟಕವೆಂದು ಹೇಗೆ ಹೇಳುತ್ತೀರಿ?' '....ರು' ಎಂಬ ವರು ಕನ್ನಡಿಗರಿದ್ದು ಮಹರಾಷ್ಟ್ರೀಯರಾಗಿರುವರೆಂಬುದು ನನ್ನ ಸ್ನೇಹಿತರಿಗೆ ಹೇಗೆ ತಿಳಿದೀತು? ಬೆಳಗಾವಿಯಲ್ಲಿ ಏಕೀಕರಣ ಸಂಘದ ಕಚೇರಿಯಿದೆ; ಸಾಧ್ಯವಿದ್ದ ಮಟ್ಟಿಗೆ ಅಧ್ಯಕ್ಷರು ಹಾಗು ಕಾರ್ಯದರ್ಶಿಗಳು ಪ್ರಚಾರ ಕಾರ್ಯವನ್ನು ನಡೆಸಿದ್ದಾರೆ. ಆದರೆ ಇಂತಹ ಸಂಸ್ಥೆಗಳಿಗೆಲ್ಲ ನಮ್ಮಲ್ಲಿ ದುಡ್ಡೆಲ್ಲಿ? ಬೆಳಗಾವಿಯ ಸಿನೇಮಾ ಗೃಹಗಳಲ್ಲಿಯೇ ಬೆಳಗಾವಿಯ ಜಿಲ್ಹೆಯ 'ಮಹಾರಾಷ್ಟ್ರ-ಕರ್ನಾಟಕ'ತ್ವದ ಬಗ್ಗೆ ದಿನಬೆಳಗಾದರೆ ಪ್ರಚಾರ ನಡೆಯುತ್ತದೆ. ಬೆಳಗಾವಿ ಜಿಲ್ಹೆಯ ವಿದ್ಯಾರ್ಥಿಗಳ ಸಮ್ಮೇಲನವಾಯಿತು. ಏಕೀಕರಣದ ಠರಾವನ್ನು ಅಲ್ಲಿ ತರಬೇಕೆಂದರೆ ವಿರೋಧವೆ? ಹೋಳಿ ಹುಣ್ಣಿಮೆಯಲ್ಲಿ ಆ ಸಭೆಯ ಮುಕ್ತಾಯವಾಯಿತಂತೆ. ಬೆಳಗಾವಿಯಲ್ಲಿ ಸಾರ್ವಜನಿಕ ಭಾಷಣವಾಗಬೇಕಾದರೆ 'ಕನ್ನಡ'ವನ್ನು ವಿರೋಧಿಸಲು ಜನರು ತಂಡಗಟ್ಟಿಕೊಂಡು ಬರುವರು. 'ಮರಾಠಿ'ಯನ್ನು ವಿರೋಧಿಸಲು ಕನ್ನಡಿಗರು ಗುಂಪುಕಟ್ಟಿಕೊಂಡು ಹೋಗಬೇಕಾಗುವದು. ಹೀಗೆ ಒಂದಲ್ಲ ಎರಡಲ್ಲ, ಅನೇಕ ವಿಚಿತ್ರಗಳ ತವರೂರಾಗಿದೆ ಬೆಳಗಾವಿ.

ಹನಿ ಹನಿ ಕೂಡಿ ಹಳ್ಳವಾದಂತೆ ಇತ್ತೀಚೆಗೆ ಬೆಳಗಾವಿಯ ಕನ್ನಡ-ತನವು ಜೋರಾಗಿ ತಲೆಯೆತ್ತಿದೆ. ಕಾಡಿನಲ್ಲಿ ಕುರಿಯು 'ಬ್ಯಾಂ' ಎಂದಂತೆ ಒಬ್ಬರಿಬ್ಬರು ಮೊದಲಿಗೆ 'ಕನ್ನಡ'ವೆಂದು ತಲೆಯೊಡೆದುಕೊಂಡರೂ ಯಾರೂ ಅವರನ್ನು ಕೇಳಲಿಲ್ಲ. ಅದರ ಸಾಹಿತ್ತಿಕ ಇಲ್ಲವೆ ಸಾಂಸ್ಕೃತಿಕ ಸ್ವರೂಪವು ಜನರ ಮನಸ್ಸನ್ನು ಹಿಡಿಯಲಿಲ್ಲ. ಮುಂದೆ ಬೆಳಗಾವಿಯಲ್ಲಿ ಭಾರತೀಯ ಕಾಂಗ್ರೆಸ್ಸಿನ ಕರ್ನಾಟಕದ ಅಧಿವೇಶನವು ಅತಿ ವಿಜೃಂಭಣೆ ಯಿಂದ ನೆರವೇರಿತು. ಸೋಜಿಗದ ಮಾತೆಂದರೆ,—ಭರತಖಂಡಕ್ಕೆಲ್ಲ ಕರ್ನಾಟಕದ ಪರಿಚಯವು ಮೊದಲನೆಯ ಸಲ ಸಂಭವಿಸಿದ್ದು ಬೆಳಗಾವಿ ಯಲ್ಲಿ. ಕರ್ನಾಟಕ ಸಾಹಿತ್ಯ ಸಮ್ಮೇಲನದ ಒಂದೆರಡು ಅಧಿವೇಶನಗಳೂ

ಅಲ್ಲಿ ನೆರವೇರಿದವು. ೧೯೨೯ ರ ಸಮ್ಮೇಲನವು ಇನ್ನೂ ನನಗೆ ನೆನಪಿದೆ. ಕರ್ನಾಟಕದ ಸಮ್ಮೇಲನವಾಗಿ ಕೆಲವು ದಿನಗಳಲ್ಲಿಯೇ ಮರಾಠಿ ಸಾಹಿತ್ಯ ಸಮ್ಮೇಲನವು ಅಲ್ಲಿ ಒದಗಿ ಬಂದಿತು. ಇದಕ್ಕಿಂತ ಮೊದಲು ತಿಂಗಳಾನುಗಟ್ಟಲೆ ರಸಕಸಿ ನಡೆದಿತ್ತು. ಕರ್ನಾಟಕ ಕಾಲೇಜಿನಲ್ಲಿಯ ಕೆಲವು ಮಹರಾಷ್ಟ್ರೀಯ ಪ್ರೊಫೆಸರರನ್ನು ಸಂದರ್ಶಿಸಿದ ಮಹನೀಯರೊಬ್ಬರು 'ಅಧಿಕಾರವಿಲ್ಲದೆ ಕನ್ನಡದಲ್ಲಿ ಗೀಚುವವರೇನು ಹೇಳುತ್ತಾರೆ? ನಮ್ಮ ಬೆಳಗಾವಿ ಸಮ್ಮೇಲನಕ್ಕೆ ಅನೇಕ ಜನ ಬುದ್ಧಿವಂತರ ಬೆಂಬಲವಿದೆ' ಎಂದು ಗರ್ಜಿಸಿದರು. 'ಬೆಳಗಾವಿಯು ಬಹಳ ಸೂಕ್ಷ್ಮ ಪ್ರಶ್ನೆ; ಮಹರಾಷ್ಟ್ರದ ಸಾಹಿತ್ಯ ಸಮ್ಮೇಲನವನ್ನು ಬೇಕಾದರೆ ನೀವು ಧಾರವಾಡದಲ್ಲಿ ಹೂಡಿರಿ, ಬೆಂಗಳೂರಿನಲ್ಲಿ ಹೂಡಿರಿ' ಎಂದು ಅಂಗಲಾಚಿ ಕೇಳಿದರೂ ಯಾವ ಪುಣ್ಯಾತ್ಮರೂ ಕಿವಿಗೊಡಲಿಲ್ಲ. ಮುಂದೆ ಮರಾಠಿ ಸಮ್ಮೇಲನದ ಹೊತ್ತಿಗೆ ಕನ್ನಡಿಗರು ಕೆಲವರು ಕರಿ ನಿಶಾನೆಗಳ ಮೆರವಣಿಗೆಯನ್ನು ಸಹ ತೆಗೆದರು. ಬೆಳಗಾವಿಯ ಧುರೀಣರಲ್ಲಿ ಕೆಲವರು ಕರಿ ನಿಶಾನೆಗಳನ್ನು ಬರಿ ಪುಂಡಾಟಿಕೆಯೆಂದು ಟೀಕಿಸಿದರು.

ಬೆಳಗಾವಿಯ ದುರ್ದೈವವೆಂದರೆ ಮೊನ್ನೆ ಮೊನ್ನೆಯವರೆಗೆ ಅಲ್ಲಿಯ ಕನ್ನಡದ ಏಳಿಗೆಗೆ ಜನರ ಕಣ್ಣನ್ನು ತುಂಬುವಂಥ ಮುಖಂಡರೇ ದೊರೆಯಲಿಲ್ಲ. ಇದು ಬರಿ ಹುಡುಗರ ಉಲಕೋಚಿತನವೆಂದು ಇನ್ನೂ ತಿಳಕೊಂಡವರಿದ್ದಾರೆ. ಟೈಮ್ಸ್ ಪತ್ರಿಕೆಯ ಬೆಳಗಾವಿಯ ಪ್ರತಿನಿಧಿಯು ಕನ್ನಡ–ಮರಾಠಿ ವಾದದ ಬಗ್ಗೆ ಕಳಿಸುತ್ತಿರುವ ಸುದ್ದಿ-ಸುವಿಚಾರಗಳನ್ನು ವಾಚಕರು ಅವಶ್ಯವಾಗಿ ಓದಬೇಕು. ಪ್ರಫುಲ್ಲ ವಾತಾವರಣದಲ್ಲಿ ಸೂಕ್ಷ್ಮ ವಿಷವಾಯುವನ್ನು ಈ ಅಸಾಮಿಗಿಂತ ಹೆಚ್ಚು ಪರಿಣಾಮಕಾರಕವಾಗಿ ಬಿಡಬಲ್ಲವರಾರು? ಇಂಥ ಕೊಳಕ ಹೊಂಸುಗಳನ್ನು ಇನ್ನಾವ ಪತ್ರಿಕಾವ್ಯವಸಾಯಿಗಳೂ ಬಿಟ್ಟಿಲ್ಲ. ಬೆಳಗಾವಿಗೂ ಲಂಡನ್ನಿನ ಫ್ಲೀಟ್ ಸ್ಟ್ರೀಟಿಗೂ ಆರು ಸಾವಿರ ಮೈಲುಗಳಿಗಿಂತ ಹೆಚ್ಚು ಅಂತರವಿದ್ದರೂ ಟೈಮ್ಸಿನ 'ಪ್ರಾತಿನಿಧಿಕ' ಪತ್ರಗಳನ್ನು ಓದಿದಾಗ ಅವು ಒಂದಕ್ಕೊಂದು ಹೊಂದಿರಬೇಕೆಂದೆನಿಸುತ್ತದೆ.

ಅದಿರಲಿ. ಕನ್ನಡತನದ ನೇತೃಗಳಾರು ಬೆಳಗಾವಿಯಲ್ಲಿ? ತೀರ ಇತ್ತೀಚೆಗೆ, ಕಾಲೇಜುಗಳ ಸೌಕರ್ಯದ ಮೂಲಕ, ಅನೇಕ ಸಾಹಿತ್ಯಾಭಿಮಾನಿಗಳು

ಬೆಳಗಾವಿಗೆ ಲಭಿಸಿದ್ದಾರೆ. ಅಲ್ಲದೆ ನ್ಯಾಯಪಕ್ಷಪಾತಿಗಳಾದ ಕೆಲವು ಜನ ವಕೀಲರು ಕನ್ನಡಕ್ಕಾಗಿ ಟೊಂಕಕಟ್ಟಿದ್ದಾರೆ. ಆದರೆ ಕನ್ನಡಕ್ಕಾಗಿ ಮೊದಲು ಕೆಲಸಮಾಡುವವರು ಒಮ್ಮೊಮ್ಮೆ ತಮ್ಮವರ ವಿರೋಧವನ್ನೇ ಕಟ್ಟಿಕೊಳ್ಳುವ ಪ್ರಸಂಗ ಬಂತು. 'ಜೋಳದ ಪಾಳಿ'ಯನ್ನು ನೆನೆಯಬೇಕೆನ್ನುವವರಿಗೆ ಕನ್ನಡವು ಸಾಧಿಸಲಿಲ್ಲ. ಕನ್ನಡವನ್ನು ಸಾಧಿಸಿದವರಿಗೆ ಅಂತಹ ನೆನಹು ಸಾಧಿಸಲಿಲ್ಲ. ನಾಡನರಿಗಳೂ ಕನ್ನಡ ಕಾಂತಿ ಸಂಘದ ಕಿಡಿಗಳೂ ಹಾಗು ಉಳಿದ ಕನ್ನಡ ನುರಿಗಳೂ ಬೆಳಗಾವಿಯ ಕನ್ನಡತನವನ್ನು ಕಾಯಬೇಕಾಗಿ ಬಂತು. ಹಲಕೆಲವು ಶಿಕ್ಷಕರ ಬೆಂಬಲವು ಮಾತ್ರ ಅವರಿಗೆ ಸಿಗುವದು ಸಾಧ್ಯವಾಯಿತು.

ಇತ್ತೀಚೆಗೆ ಬೆಳಗಾವಿಯು ಬೆಳೆಯಹತ್ತಿದೆ,—ಅಂದರೆ ಬೆಳಗಾವಿಯಲ್ಲಿ ಕನ್ನಡವು ಬೆಳೆಯಹತ್ತಿದೆ. ಅಲ್ಲಿಯ ಸಾರ್ವಜನಿಕ ವಾಚನಾಲಯದ ಆಡಳಿತವು ಕನ್ನಡಿಗರದಾಯಿತೆಂದು ನಾವು ಕೇಳುತ್ತೇವೆ. ಲಿಂಗರಾಜ ಕಾಲೇಜು ಅಚ್ಚ ಕನ್ನಡಿಗರ ಸಂಸ್ಥೆ. ಬಿ. ಟಿ. ಕಾಲೇಜಿನ ಶಿಕ್ಷಕ ವರ್ಗದಲ್ಲಿ ಕೆಲವು ಜನ ಕನ್ನಡಿಗರಿದ್ದುದು ನಮಗೆ ಹೆಮ್ಮೆಯ ವಿಷಯ. ವಿಶೇಷತಃ ವಿಕ್ಟೋರಿಯಾ ಕಾಲೇಜು ದುರ್ದೈವದಿಂದ ಮುರಿದು ಹೋದಾಗ ಕಿಸೆಯಲ್ಲಿ ಪೈಯಿಲ್ಲದೆ ಕರ್ನಾಟಕವನ್ನು ಬಿಟ್ಟು ಹೋದ ರ್‍ಯಾ. ಕಟ್ಟಿಯವರು ಮತ್ತೆ ಕರ್ನಾಟಕದಲ್ಲಿಯ ಒಂದು ಕಾಲೇಜಿಗೆ ಪ್ರಿನ್ಸಿಪಾಲರಾಗಿ ಬಂದಿರುವದು ಅಭಿಮಾನಾಸ್ಪದವಾದ ಸಂಗತಿ. ಆದರೆ ಬಿ. ಟಿ. ಕಾಲೇಜು ಕರ್ನಾಟಕ ಹಾಗು ಮಹರಾಷ್ಟ್ರ ಪ್ರಾಂತಗಳ ಸಲುವಾಗಿ ಸ್ಥಾಪಿತವಾಗಿದೆಯೆಂದು ಸರಕಾರವೇ ಡಾಣಾಡಂಗುರವಾಗಿ ಸಾರಿರುವದಲ್ಲ! ಬೆಳಗಾವಿಗಿದ್ದ ತ್ರಿಶಂಕುಸ್ಥಿತಿಯನ್ನು ದೃಢಪಡಿಸಲು ಹಾಕಿದ ಹೊಂಚಿದೆಂದು ಕೆಲವರಾಡಿಕೊಳ್ಳುತ್ತಾರೆ. ಏನಿದೆಯೋ ಸರಕಾರವೆ ಬಲ್ಲದು. ಇದೀಗ ಇಲ್ಲಿ ಲಾ. ಕಾಲೇಜೂ ಹೊರಟಿರುವದು. ಇದು ಎಷ್ಟರ ಮಟ್ಟಿಗೆ ಕರ್ನಾಟಕವಿದೆಯೋ ನೋಡಬೇಕಾದ ಮಾತು. ಅದರಂತೆಯೆ ಆಯುರ್ವೇದ ಕಾಲೇಜಿನ ವಿಷಯವಾಗಿದೆ.

ಬೆಳಗಾವಿಯು ಇನ್ನೂ ಬೆಳೆಯಲಿ; ಉತ್ತರ ಕರ್ನಾಟಕದಲ್ಲಿ ಬಿತ್ತರವಡೆದ ಪಟ್ಟಣವಾಗಲಿ. ಆದರೆ ಮೊಟ್ಟಮೊದಲು ಈಗಾಗಲೆ ಹುಟ್ಟಿ ಬಂದ ಸಂಸ್ಥೆಗಳನ್ನು ಕನ್ನಡ ಕುಲದ ದೃಷ್ಟಿಯಿಂದ ಅದು ಚೆನ್ನಾಗಿ **ಅರಗಿಸಿಕೊಳ್ಳಲಿ**; ಕುಡಿದ ಹಾಲನ್ನು ದಕ್ಕಿಸಿಕೊಳ್ಳಲಿ.

ಹೀಗೆ ಹೇಳುವಾಗ ನಾವು ಮಹರಾಷ್ಟ್ರಕ್ಕೆ ಯಾವ ಅಪಾಯವನ್ನೂ ಬಯಸುವದಿಲ್ಲ. ಮಹರಾಷ್ಟ್ರದಲ್ಲಿ ಬೇಕಾದಕ್ಕಿಂತ ಹೆಚ್ಚಾಗಿ ಸಂಸ್ಥೆಗಳಿವೆ. ಮಹರಾಷ್ಟ್ರ ಸಂಸ್ಕೃತಿಯ ಕೋಟೆಗಳು ನಾಗಪುರದಿಂದ ಸಾತಾರೆಯವರೆಗೆ ಹಬ್ಬಿವೆ. 'ನಿಮ್ಮ ಚಕ್ರ ಮುಂದೆ ಸಾಗಿದೆ. ನಮ್ಮ ಬೆಳುವಣಿಗೆಗೆ ಮಾತ್ರ ನೀವು ಚಕ್ರವನ್ನು ತಂದರೆ ನಡೆಯಲಿಕ್ಕಿಲ್ಲ' ವೆಂದೇ ನಾವಿಂದು ಅವರಿಗೆ ಹೇಳಬೇಕಾಗಿದ.

—ಕ್ರಾಂತಿಪ್ರಿಯ

---

# ನಂದಗಡ

ಸಾಲುಗುಡ್ಡಗಳ ಮಧ್ಯಶಿಖರವೊಂದರಲ್ಲಿ "ಆನಂದಗಡವು" ತನ್ನ ಗತವೈಭವವನ್ನು ಬೀರಲು ಹೆದರಿ ವನಶ್ರೀಯ ಜುಡುಪಿನಲ್ಲಿ ಮುಚ್ಚಿಕೊಂಡರೂ ಆ ನಿಸರ್ಗದ ಕೊಡೆಯು ನೋಡುಗರಿಗೆ ಆನಂದವನ್ನೀಯದೆ ಬಿಡದು. 'ಆ' ಎಂದು ಹಸನ್ಮುಖದಿಂದ ಕೀರ್ತಿಶೇಷವನ್ನು ತೋರಿಸಲೂ ಬಲವಿಲ್ಲದೆ 'ಆ' ಒರೆಸಿದ ಊರೇ ನಂದಗಡ.

ಗುಡ್ಡದ ಪಕ್ಕಗಳಲ್ಲಿ ಮರೆ ಮಾಡಿಕೊಂಡು ಬೆಳಗಾವಿ–ಗೋವಾ ದಾರಿಗೆ ಆತುಕೊಂಡಿದೆ ಆ ಊರು. ವೈಭವಶಾಲಿಯಾದ ಕದಂಬ ರಾಜನಿಗೆ ಕುಲಸ್ವಾಮಿಯಾದ ನರಸಿಂಹನು ಕಾಲವನ್ನೆಣಿಸುತ್ತ ಈಗ ಕುಳಿತಿರುವ ಕ್ಷೇತ್ರವಾಗಿ, ಹಿಂದೆ ರಾಜಧಾನಿಯಾಗಿ ಮೆರೆದ ಹಲಸಿಗೆಯು, ಈ ಊರಿಂದ ಎರಡೇ ಮೈಲು ಅಂತರದಲ್ಲಿದೆ. ಕರ್ನಾಟಕದ ವರ್ತುಳದ ಮಧ್ಯ ಬಿಂದುವಿನಂತೆ ಇದ್ದ ನಂದಗಡವು ಇಂದು ಪರಿಘರೇಷೆಯಾಗಿ ಮಸಕು'ಮಸಕಾಗ ಹತ್ತಿದೆ. ಈ ಗೆರೆಯಾದರೂ ಉಳಿದರೆ ಸಾಕು ಎನ್ನುವ ಪ್ರಸಂಗ ಬಂದಿದೆ.

ಕದಂಬರ ರಾಜ್ಯವು ಎಲ್ಲಿದ್ದಿತೋ, ಎಂದೋ, ಎಂಬ ಅರಿವು ಇರದಿದ್ದರೂ ಕರ್ನಾಟಕದ ಸ್ವಾತಂತ್ರ್ಯದ ಪತಾಕೆಯ ರಕ್ಷಣೆಗಾಗಿ ಬಲಿದಾನವನ್ನೂ ಮಾಡಲು ಸಿದ್ಧಳಾಗಿ ಮಿಂಚಿದ ಮಹಿಳೆಯಾದ ವೀರರಾಣಿ ಕಿತ್ತೂರ ಚೆನ್ನಮ್ಮದೇವಿಯ ಆಶ್ರಯದಲ್ಲಿ ಬಹುಕಾಲ ವೈಭವದಿಂದ ಬಾಳಿದ

ನಂದಗಡವಿದು. ಆ ವೀರಮಾತೆಯು ಸ್ಥಾನಬದ್ಧತೆಯಿಂದ ತಳಮಳಗೊಂಡ ಪ್ರಜಾಪುತ್ರರ ತಂಡವೊಂದು ಸಂಗೊಳ್ಳಿಯ ರಾಯಣ್ಣನ ನಾಯಿಕತ್ವದಲ್ಲಿ ಕಳಚಿದ ಕನ್ನಡ ಬಾವುಟವನ್ನು ಎತ್ತಿ ಹಿಡಿಯಲು ಅದೆಷ್ಟೋ ಪ್ರಯತ್ನಿಸಿದ ಮೇರೆಯಿದು. ಕಾಲಚಕ್ರವು ತಿರುಗುವಾಗ ಉಚ್ಚ-ನೀಚ, ಬಡವ-ಬಲ್ಲಿದ ಎಂಬ ಭಾವನೆಯನ್ನು ತಾಳದೆ ಸಿಕ್ಕವರನ್ನು ದವಡೆಯಲ್ಲಿ ತಿಕ್ಕಿ ನುಂಗುವು ದೆಂಬ ಧರ್ಮಕ್ಕನುಸರಿಸಿ ರಾಯಣ್ಣನೂ ಸಿಕ್ಕುಬೀಳಲು, ಅಗಸಿಯ ಬಾಗಿಲಿಗೆ ಗಲ್ಲಿಗೇರಿದ ಊರೂ ಇದೇ. ಆ ಅಗಸಿಯ ಮುಂದಿನ ಓಣಿಗೆ ಕೀರ್ತಿಶೇಷನ ಸ್ಮರಣಾರ್ಥವಾಗಿ ' ರಾಯಪೂರ ' ವೆಂದು ಈಗಲೂ ಕರೆಯುವರು. ಅಂದೇ (ರಾಯಣ್ಣನಿಗೆ ಮರಣಶಿಕ್ಷೆಯಾದ ದಿವಸ) ತಳಮಳಗೊಂಡ ಜನರು, ಮಾಡಿದರೆ ಮೋಕ್ಷ, ಆಡಿದರೆ ಶಿಕ್ಷೆ—ಇಂಥ ಕಟುವಾದ ಸ್ಥಿತಿಯಲ್ಲಿ ಕೊಡಲಿಯ ತಿಂಡಿಯನ್ನು ತೀರಿಸುವದಕ್ಕಾಗಿ ಒಂದು ಆಲದ ಟೊಂಗೆಯನ್ನು ಕಡಿದು ರಾಯಣ್ಣನ ನೆನಪೆಂದು ನಡಿಸಿರುವರು. ಯಾರ ಕೈಗೂ ಸಿಗಲಾರದ ಜೀವವು ಒಂದೆಡೆ ನೆಟ್ಟದರೆ ನಿಲ್ಲುವದೇ ? ಪಾತಾಳಲೋಕವನ್ನೇ ಭೇದಿಸಿ ಸ್ವರ್ಗವನ್ನು ಮುಟ್ಟಲೂ ಹವಣಿಸುತಿದೆ ಈ ವಟವೃಕ್ಷವು. ಪರೋಪಕಾರದ ಜೀವವು ಒಂದು ಗಿಡವಾದರೂ ಪಾಂಥಸ್ಥರಿಗೆ ತಂಗುಮನೆಯಾಗಿದೆ ಈ ಗಿಡದ ಒಡಲು.

ತಪಸ್ವಿಯ ಕೂದಲುಗಳು ಅವನ ಪವಿತ್ರತೆಯನ್ನು ತೋರಿಸುವಂತೆ ಈ ವಟವೃಕ್ಷದ ಮೇಲುಬೇರುಗಳು ಕೆಳಗಿಳಿದು ಕೀರ್ತಿಯನ್ನು ಬೀರಿ ಕಾಲದ ಅನುಮಾನವನ್ನು ಕೊಡುತ್ತವೆ. ನಡುವೇ ತೂಗಾಡುವ ಬೇರುಗಳು ಬಾಲಗೋಪಾಲರಿಗೆ ನಿರಂತರ ನಾಗರಪಂಚಮಿಯನ್ನು ಮಾಡಿಬಿಟ್ಟಿವೆ.

ರೈಲುದಾರಿಯಾಗದ ಮೊದಲು ಇದೊಂದು ಪಡಿಮೂಲೆ ; ವ್ಯಾಪಾರದ ಕೇಂದ್ರವಾಗಿ ಮುಂದುವರಿದಿತ್ತು. ರೇಲ್ವೆಮಾರ್ಗವು ನಂದಗಡವನ್ನು ಕಾಣದೆ ಬೆಳಗಾವಿಯತ್ತ ಹೋಯಿತು. ಆಗ ಉದ್ದಿಮೆದಾರರೆಲ್ಲರೂ ಅದೇ ನಗರದ ಹಾದಿಯನ್ನು ಹಿಡಿದು " ಅಮುಚ ಮೂಳಗಾವ ನಂದಗಡ " ಎಂಬ ಆಢ್ಯತೆ ಯಿಂದ ಹೇಳಿಕೊಳ್ಳುವರು. ಈಗ ಇದೊಂದು ಹಳ್ಳಿ ಮಾತ್ರ.

ಎಷ್ಟೇ ಪ್ರಸಂಗ ಬಂದರೂ ಆನುವಂಶಿಕ ರಕ್ತವು ತನ್ನ ಸಂಸ್ಕೃತಿ ಯನ್ನು ಬಿಡದು. ಹಿಂದೆ ಸ್ವಾತಂತ್ರ್ಯಕ್ಕಾಗಿ ಬಲಿದಾನ ಮಾಡಿದ ನಂದ—

ಗಡವು ಅಹಿಂಸಾಮಯವಾದ ಇಂದಿನ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹಿಂದೆ ಬಿದ್ದಿಲ್ಲ. ಕಾಂಗ್ರೆಸ್ಸಿನ ನಿಸ್ಸೀಮ ಸೇವಕರು ಹಲವಾರು ಕೆಲಸವನ್ನು ಮಾಡುತ್ತಿರುವರು. ಅಂತೇ ಕಾಂಗ್ರೆಸ್ಸಿನ ಹಿರಿಯರು ಮೇಲಿಂದ ಮೇಲೆ ಇಲ್ಲಿಗೆ ಬರುವರು. ಈ ಸಂಗ್ರಾಮದ ರಂಗಸ್ಥಳವನ್ನು ಮಹಾತ್ಮಾ ಗಾಂಧಿಯವರು ತಮ್ಮ ಪಾದಧೂಳಿಯಿಂದ ಪವಿತ್ರವನ್ನಾಗಿ ಮಾಡಿರುವರು. ಜಿಲ್ಲೆಯ ಕಾಂಗ್ರೆಸ್ಸು ಸಂಸ್ಥೆಗಳಲ್ಲಿ ನಂದಗಡ ಮುಂದಾಗಿದೆ. ಆದರೆ ಇಲ್ಲಿಯ ಕನ್ನಡಿಗರು ತಮ್ಮನ್ನು ತಾವೇ ಮರೆತಿದ್ದುದು ತುಂಬಾ ವಿಷಾದಕರ! ಮನೆಯ ಮಾತು ಕನ್ನಡವಾದರೆ ಓದು-ಬರೆಹ, ಲೆಕ್ಕ-ಪತ್ರ ಎಲ್ಲವೂ ಮರಾಟಿ. ವಯಸ್ಸು, ವೇಳೆ, ರೊಕ್ಕದ ಎಣಿಕೆ, ತಾರೀಖು, ಇಸ್ವಿ ಮುಂತಾದ ಎಣಿಕೆಗಳನ್ನು ಕೇಳಿದಾಕ್ಷಣವೇ ಕನ್ನಡದಲ್ಲಿ ಹೇಳುವವರಿಗೆ ಬಹುಮಾನ ವನ್ನಿಟ್ಟರೆ ಇಲ್ಲಿ ಯಾರೂ ಅದನ್ನು ಗೆಲ್ಲಲಾರರು. ಪೇಶವಾಯಿ ರಾಜ್ಯ ಹೋದರೂ ಇಲ್ಲಿ ಮೋಡೀ ಲಿಪಿಯ ಸಹಿ ಇನ್ನೂ ಅಳಿದಿಲ್ಲ.

ಕನ್ನಡ ಮಾತಿನಲ್ಲಿ ಹುಣಸ, ಹಿಶೋಬ, ಖಲಾಸ, ಚುನಾವಣಿ, ಭಾವಬಂದ, ಘರಾಣೆ, ಭಾಡೆ, ದೇಣಗಿ, ನಾಣೆ, ಶೇತಕಿ, ಗಡಿ, ಭರಣಾ, ವ್ಯಾಜ, ನಾಚು, ಭಾರಿ, ವಜನ, ಹವಾಪಾಣಿ, ಪೀಕು, ಘರಭರಣಿ, ಮಾಲಕ, ಕವಿಲಾರು, ಜಳಾವು, ಅಢಳಾಸು, ಇಜಾ, ಜಖಮು, ಗಲ್ಲಿ, ಮಾಪು, ಮಹಗಾಯಿ ಇತ್ಯಾದಿ ಎಷ್ಟೋ ಮರಾಟಿ ಶಬ್ದಗಳಿಗೆ ಪ್ರತ್ಯಯ ಗಳನ್ನೂ ಹಚ್ಚಿ ಬಳಸುವರು. ಮರಾಟಿಗರೂ ಎಷ್ಟೋ ಕನ್ನಡ ಶಬ್ದಗಳನ್ನು ದುರಂತಮಾಡಿ, ಚೆ, ಲಾ, ಆದಿ ಪ್ರತ್ಯಯಗಳನ್ನು ಹಚ್ಚಿ ಬಳಸುವರು. ಒಟ್ಟಿನಲ್ಲಿ ಇಲ್ಲಿಯ ಜನರಿಗೆ ಕನ್ನಡ, ಮರಾಟಿ ಎರಡೂ ಭಾಷೆಗಳು ಬರುತ್ತಿದ್ದರೂ ಮರಾಟಿಗರು ಕನ್ನಡ ಅರಿಯದವರಂತೆ ವರ್ತಿಸುವರು. ಉದಾರ ಮನಸ್ಸಿನ ಕನ್ನಡಿಗರು ಒಮ್ಮೊಮ್ಮೆ ತಮ್ಮತಮ್ಮೊಳಗೂ ಮರಾಟಿ ಯನ್ನೇ ಮಾತಾಡುವರು. ಇದೊಂದು ಗೌರವವೆಂದೇ ತಿಳಿಯುವರು. ಇಲ್ಲಿ ಕನ್ನಡ-ಮರಾಟಿ ಶಾಲೆಗಳೆರಡೂ ಇರುವವು. ಆದರೆ ಮರಾಟಿಗೆ ೮ ಜನ, ಕನ್ನಡಕ್ಕೆ ೪ ಜನ ಮಾಸ್ತರರಿರುವರು. ಕನ್ನಡದ ಬಗ್ಗೆ ಕಳಕಳಿ ಇದ್ದು ಕೆಲಸ ಮಾಡುವವರು 'ಉಪದ್ವ್ಯಾಪಿಗಳು' ಕನ್ನಡಿಗರೂ ಮರಾಟಿಯನ್ನೇ ಎತ್ತಿ ಅದರಲ್ಲಿಯೆ ಮಾತನಾಡಿದರೆ ದೇಶಭಕ್ತರು. ಇಂಥ ಧರ್ಮಸಂಕಟವಿಲ್ಲಿ.

ಈ ಗಡಿನಾಡಿನ ಹಳ್ಳಿಗಳ ಸ್ಥಿತಿಯೇ ಹೀಗಾಗಿರುವದು. ಕನ್ನಡಿಗರಷ್ಟೇ ಕನ್ನಡವನ್ನು ಕಲಿತು ತಾಯ್ನುಡಿಯ ಮಾನ ಕಾಯ್ದುದರದೊಂದು ಸಂತೋಷವೇ. ಗಡಿನಾಡಿನ ರೇಷೆಯನ್ನು ಉಳಿಸಬೇಕಾದರೆ ಕನ್ನಡದ ಚಟುವಟಿಕೆಗಳು ಹೊರಗಿನ ಕನ್ನಡಿಗರಿಂದ ಹೆಚ್ಚಾಗಿ ಬೇಕು.

—**ವೆಂಕಟರಾವ ಬಿದರಕುಂದಿ**

——

# ಅ ಥ ಣಿ

ಅಥಣಿಯು ನೋಡಲಿಕ್ಕೆ ಅಷ್ಟೊಂದು ಚೆಲುವಾದ ಊರಲ್ಲ; ಅಭ್ಯಾಸ ದೃಷ್ಟಿಯಿಂದ ನೋಡಬೇಕೆಂದರೆ ಐತಿಹಾಸಿಕ ಪಟ್ಟಣವಲ್ಲ. ಇರಲಿಕ್ಕೆ ಅಷ್ಟೊಂದು ಅನುಕೂಲವಾದ ಸ್ಥಳವಲ್ಲ. ಆದರೂ ನಮ್ಮ ಸ್ಮೃತಿಪಟಲದಲ್ಲಿ 'ಅಥಣಿ, ಅಥಣಿ' ಎಂಬ ಹೆಸರು ಸುಳಿಯುವದೇಕೆ? 'ಶ್ರೀ' ಯವರು ವಿನೋದ–ವಿನಯದಿಂದ ನುಡಿದಂತೆ ಅಥೇನಿ ದೇವಿಯಿಂದ ಹೆಸರುವೆತ್ತ ಅಥೆನ್ಸ ನಗರದ ನೆನವು ತರುವದೆಂದೊ? ಒಮ್ಮೆ ಪಡಿಮೂಲೆಯ ಸ್ಥಳವಾಗಿ ಇನ್ನೂ ವ್ಯಾಪಾರದ ಸೂತ್ರಗಳನ್ನು ಕಾಯ್ದುಕೊಂಡಿದೆಯೆಂದೊ? ನದಿಯಿಲ್ಲದಿದ್ದರೂ ಹಳ್ಳವಿರುವದೆಂದೊ? ಇಲ್ಲವೆ ರೇಲ್ವೆಯನ್ನು ಬಿಟ್ಟು ದೂರವಾಗಿದೆಯೆಂದೊ?

ಅಥಣಿಯು ಇಂದಿನ ಕನ್ನಡದ ಇತಿಹಾಸದಲ್ಲಿ ತನ್ನ ಸ್ಥಾನವನ್ನು ಕಾಯ್ದುಕೊಂಡಿದೆ. ಹಿಂದಕ್ಕೊಮ್ಮೆ ಒಬ್ಬ ವೀರಶೈವ ಮಹಾಪುರುಷರ ಕರ್ಮಕ್ಷೇತ್ರವಾಗಿತ್ತು ಅಥಣಿ. ಲೋಕಮಾನ್ಯರ ಯುಗದಲ್ಲಿ ಬೆಳಗಾವಿ ಜಿಲ್ಲೆಯಲ್ಲೆಲ್ಲ ರಾಜಕಾರಣ ಪ್ರಜ್ಞೆಯು ಬೆಳೆದ ಊರೆಂದು ಅಥಣಿಯು ಪ್ರಸಿದ್ಧಿಪಡೆಯಿತು. ಇಂದಿಗೂ ಆರ್. ಎಸ್. ಎಸ್. ದ ಚಳವಳಿಯನ್ನು ಹಿಡಿದು ಕಾಂಗ್ರೆಸ್ಸಿನ ಕ್ರಾಂತಿಯವರೆಗೆ ಜಾಗ್ರತಿಯ ಎಲ್ಲ ಪ್ರಕಾರಗಳನ್ನು ಇಲ್ಲಿ ನಾವು ಕಾಣಬಹುದು. ಆದರೆ ಕನ್ನಡದ ಪ್ರಾಣ ಪ್ರತಿಷ್ಠಾಪನೆಗೆ ಇಲ್ಲಿ ಪ್ರಾರಂಭವಾಗಿ ಈಗ ಸುಮಾರು ಹತ್ತು ವರ್ಷಗಳಾದವು ಮಾತ್ರ.

ಇದೇಕೆ, ಕನ್ನಡದ ವಿಷಯಕ್ಕೆ ಜನರಿಗೆ ಇಷ್ಟೊಂದು ದಾಕ್ಷಿಣ್ಯವೇಕಿತ್ತೆಂದು ವಾಚಕರು ಕೇಳಬಹುದು. ಹತ್ತು ವರ್ಷಗಳ ಹಿಂದೆ ಅಲ್ಲಿ ಉಪನ್ಯಾಸಕ್ಕೆಂದು ಹೋಗಿದ್ದು ಈ ಲೇಖಕನಿಗೆ ನೆನಪಿದೆ. ಅಥಣಿಯ ಗಣೇಶೋತ್ಸವದಲ್ಲಿ ಮರಾಠಿಗೇ ಪ್ರಾಶಸ್ತ್ಯವಿತ್ತು. ಆ ವರ್ಷ ಒಂದೆರಡು ಉಪನ್ಯಾಸಗಳನ್ನು ಬಿಟ್ಟರೆ ಎಲ್ಲವೂ ಮರಾಠಿಯಲ್ಲಿಯೇ ಸಾಗಿತ್ತು. ಒಂದು ದಿವಸದ ಕಾರ್ಯಕ್ರಮಕ್ಕೆಂದು ಈ ಲೇಖಕನು ಹೋಗಿದ್ದನು. ಮರುದಿನವೇ ಒಂದು ಮರಾಠಿ ಉಪನ್ಯಾಸವಿತ್ತು. ಅದನ್ನು ಕುಳಿತು ಕೇಳಿದನು. ಒಂದು ಗುಡಿಗುಂಡಾರವಲ್ಲಿ ಓರ್ವ ಮಹಾರಾಷ್ಟ್ರೀಯ ಪಂಡಿತರು ತಮ್ಮ ಉಚ್ಚ ಶೈಲಿಯಲ್ಲಿ ಉಪನಿಷತ್ತುಗಳ ಬಗ್ಗೆ ಮಾತನಾಡುತ್ತಿದ್ದರು. ಕೆಲವು ಜನ ವಯಸ್ಸಾದವರೂ ನೂರಾರು ಸಾಲೆಹುಡುಗರೂ ಕುಳಿತು ಅವರು ಹೇಳಿದ್ದನ್ನು ಕೇಳುತ್ತಿದ್ದರು. ತೂಕಡಿಸುವ ಹುಡುಗರನ್ನು ಸತತವಾಗಿ ಎಚ್ಚರಗೊಳಿಸುವ ಕೆಲಸವಲ್ಲದೆ ಉಪನ್ಯಾಸಕರ ಮಾತಿಗೆ ತಲೆದೂಗುವ ಹೊಣೆಯೂ ವಯಸ್ಸಾದವರ ಮೇಲಿತ್ತು. ಅಂತೂ ಉಪನ್ಯಾಸವು ಮುಗಿದ ಮೇಲೆ ಉಪನ್ಯಾಸಕರು ಪಾರಾದೆವೆಂದರು, ಶ್ರೋತೃಗಳು ಉಳಿದೆವೆಂದರು.

ಇದು ಯಾರ ತಪ್ಪು ? ತನ್ನರಿವೇ ತನಗಿಲ್ಲದ ಜನತೆಯದು. ತನ್ನ ಭಾಷೆ ಯಾವುದು, ತನ್ನ ಒಲವುಗಳೇನು— ಇದೊಂದನ್ನೂ ತಿಳಿಯದೆ ಉತ್ತರದಿಂದ ಉಪನ್ಯಾಸಕರನ್ನು ಕರೆಯಿಸಿದರೆ, ಪಾಪ ! ಅವರೇನು ಮಾಡಿಯಾರು ? ಮರಾಠಿಯ ವರ್ಚಸ್ಸಿನ ಬಗ್ಗೆ ಇದ್ದ ಮೂಢ ಕಲ್ಪನೆಯಿಂದ ಜನತೆಯೇ ಮೋಸ ಹೋದರೆ ಯಾರೇನು ಮಾಡುವರು ? ಸ್ವತಃ ಮಹಾರಾಷ್ಟ್ರೀಯ ಸಾಹಿತಿಗಳೇನು ಮಾಡಬಲ್ಲರು ? ಅಥಣಿಯಲ್ಲಿಯ ಕೆಲವರು ವಿಚಾರವಂತರು ಇದನ್ನೆಲ್ಲ ಮನಸ್ಸಿನಲ್ಲಿ ತೂಗಿ,— ಅಥಣಿಯ ಸಾರ್ವಜನಿಕ ಜೀವನವು ಇನ್ನು ಮೇಲಿಂದ ನಿಚ್ಚಳವಾಗಿ ಕನ್ನಡವಿರಬೇಕೆಂದು ನಿಶ್ಚಯಿಸಿದರು. ಇವರಲ್ಲಿ ಕೆಲವರಿಗೆ ಕನ್ನಡವೇ ಬರುತ್ತಿರಲಿಲ್ಲ. ಕಷ್ಟಪಟ್ಟು ಅವರು ಕನ್ನಡವನ್ನು ಕಲಿತರು. ಅದಕ್ಕೂ ಹೆಚ್ಚು ಪ್ರಯಾಸಪಟ್ಟು ತಮಗೆ ಮರಾಠಿಯ ಮೇಲಿದ್ದ ಪ್ರಭುತ್ವವನ್ನು ಮರೆತರು. ಯಾವ ಚಳವಳಿಯೇ ಇರಲಿ, ಅದರ ಅಧಿಷ್ಠಾನವು ಕನ್ನಡದಲ್ಲಿಯೇ ಆಗಬೇಕೆಂದು ಅವರು ಸಾಧಿಸಿದರು. ಹೀಗೆ ಮಾಡುವಾಗ ಊರಲ್ಲಿಯ ಕೆಲವು ಸ್ನೇಹಸಂಬಂಧಗಳು ಮುರುಟಿದವು, ತಪ್ಪು ತಿಳುವಳಿಕೆಗಳು

ಬೆಳೆದವು, ಪಂಗಡಗಳಾದವು, ಆದರೆ ಇವೆಲ್ಲ ಒಮ್ಮೆ ಮುಗಿಸು ಹೋದಮೇಲೆ ಅಥಣಿಯು ಕನ್ನಡವೆಂಬ ಮಾತು ಶಾಶ್ವತವಾಗಿ ನಿಂತು, ಅಲ್ಲಿಯ ಜಾಗ್ರತೆಗೆ ಮೂರ್ತಸ್ವರೂಪವು ಬಂದಿತು. ಇದು ಹತ್ತು ವರ್ಷಗಳಲ್ಲಾದ ಪವಾಡ. ಇಂದಿಗೆ ಅಥಣಿಯು ಕರ್ನಾಟಕ ಸಂಸ್ಕೃತಿಯ ಕೋಟೆಗಳಲ್ಲೊಂದಾಗಿದೆ. ಗಡಿನಾಡಿನ ಸಮಸ್ಯೆಯನ್ನು ಹೇಗೆ ಬಿಡಿಸಬೇಕೆಂದು ವಿಚಾರ ಮಾಡುವವರಿಗೆ ಇಂದು ಅಥಣಿಯೇ ಮಾದರಿಯಾಗಿದೆ.

ಅಥಣಿಯು ಹೆಸರಾಗಲಿಕ್ಕೆ ಅಲ್ಲಿಯ ಸಾಹಿತಿಗಳೂ ಕಾರಣರಾಗಿದ್ದಾರೆ. ವ್ಯಾಪಾರದಲ್ಲಿದ್ದು ಲೆಕ್ಕವನ್ನೆಲ್ಲ ಕನ್ನಡದಲ್ಲಿಡಬೇಕೆಂದು ನಿಶ್ಚಯಿಸಿ ವರ್ತಕರಿಗೆಲ್ಲ ಮೇಲ್ಪಂಕ್ತಿಯನ್ನು ಹಾಕಿಕೊಟ್ಟ— ಹಣುಮಸಾಗರರು, ಕಾವ್ಯ ಪರಿಣತರಾದ ರೈನಾಪುರರು, ಸರ್ವಜ್ಞನ ವಿಷಯವನ್ನು ಸರ್ವರಿಗೂ ತಿಳಿಸಿದ 'ಚಿಚ್ಚಿಕೋರರು' ಹಾಗೂ 'ಅಭ್ಯಾಸಮಂಡಳ'ದ ಅನೇಕ ಸದಸ್ಯರು— ಇವರೇ ಮೊಲಾದವರ ಉತ್ಸಾಹವನ್ನು, ಕಾರ್ಯೋನ್ಮುಖತೆಯನ್ನು, ದೃಢತೆಯನ್ನು, ವಿನಯಪೂರ್ಣತೆಯನ್ನು ನೆನೆದರೆ ಮನಸ್ಸಿಗೆ ಆನಂದವಾಗುತ್ತದೆ. ಈ ಊರವರೆಲ್ಲ ಕಾರ್ಯಶೀಲರು. ಇಲ್ಲಿಯ ಸುಶಿಕ್ಷಿತರೆಲ್ಲ ಮೇಧಾವಿಗಳು, ಜಾಗೃತರು. ಇಲ್ಲಿಯ ಸಾಲೆಯಿಂದ ಹೊರಬಿದ್ದ ಹುಡುಗರೆಲ್ಲ ಧ್ಯೇಯದ ಧ್ವಜವನ್ನು ಹಿಡಿದು ಸಾಗುವವರು. ಅಂತೇ ನಾವೆಲ್ಲರೂ ಅಥಣಿಯನ್ನು ನೆನೆಸುತ್ತೇವೆ.

ಅಥಣಿಯ ನಾಗರಿಕರು ವಿನೋದಪ್ರಿಯರೂ ಅಹುದು. ಬೆಳಗಾವಿ ಜಿಲ್ಹೆಯ ಸಾಹಿತ್ಯ ಸಮ್ಮೇಲನವು ಇಲ್ಲಿ ಒಮ್ಮೆ ಕೂಡಿದಾಗ ಶ್ರೀಕಂಠಯ್ಯನವರು ಅಧ್ಯಕ್ಷರಾಗಿದ್ದರು. ಅವರ ಹೆಸರನ್ನು ಅಧ್ಯಕ್ಷಸ್ಥಾನಕ್ಕೆ ಸೂಚಿಸುವವರಲ್ಲಿ ತಾಲೂಕಿನಲ್ಲಿಯ ಪ್ರಾಥಮಿಕ ಶಿಕ್ಷಕರಲ್ಲಿ ಒಬ್ಬರು ಮುಂದುವರಿದಿದ್ದರು. ಅವರು ತಾವು ಹೇಳುವದನ್ನೆಲ್ಲ ಹೇಳಿದರು. ಆದರೆ ಪ್ರಸಂಗವಶಾತ್ ಅಧ್ಯಕ್ಷರ ಹೆಸರೇ ಅವರಿಗೆ ನೆನಪಾಗಲಿಲ್ಲ.— "ನೀಲಕಂಠಶಾಸ್ತ್ರಿಗಳು, ಇಂದು ಅಧ್ಯಕ್ಷರಾಗಬೇಕಾದ ನೀಲಕಂಠಶಾಸ್ತ್ರಿಗಳು" ಎಂದು ಅವರು ಒಂದೇ ಸಮನೆ ತಾಳಕುಟ್ಟಹತ್ತಿದರು. ಕೂಡಿದವರೆಲ್ಲ ನಕ್ಕಾಗ ತಮ್ಮಿಂದಾದ ಪ್ರಮಾದವು ಅವರಿಗೆ ತಟ್ಟನೆ ಹೊಳೆಯಿತು. ಆದರೆ ಮಾಸ್ತರರು ಹಿಂದೆಗೆಯಲಿಲ್ಲ. "ನೀವೇನು ನಗುವ ಕಾರಣವಿಲ್ಲ. ಶ್ರೀಕಂಠ, ನೀಲಕಂಠ, ಎರಡೆಂದರೂ ಒಂದೇ. ಈ ನಮ್ಮ ಶ್ರೀಕಂಠಶಾಸ್ತ್ರಿಗಳು" ಎಂದು ಮಾಸ್ತರರು ಮತ್ತೆ ಮುಂದುವರಿಸಿ

ದರು. ಕೂಡಿದವರೆಲ್ಲ ನಕ್ಕು ನಕ್ಕು ಅವರ ಹೊಟ್ಟೆ ಹುಣ್ಣಾಗಿ ಹೋದವು. ಅವರು ನಕ್ಕಿದ್ದೇಕೆ? ಮಾಸ್ತರರ ತಪ್ಪಿಗಲ್ಲ. ನಾವೆಲ್ಲರೂ ಒಮ್ಮೆಲ್ಲೊಮ್ಮೆ ತಪ್ಪಿಯೇ ತಪ್ಪುತ್ತೇವೆ. ಆದರೆ ಆ ಸನ್ನಿವೇಶವೇ ಅಂತಹದು. ಸನ್ನಿವೇಶದ ಹಾಸ್ಯಮಯತೆಯನ್ನು ಅಲ್ಲಿಯ ಜನರು ಸ್ವಾರಸ್ಯಮಯವಾಗಿ ಸವಿಯಬಲ್ಲರು.

—ಕ್ರಾಂತಿಪ್ರಿಯ

---

# ವಿಜಾಪುರ

ವಿಜಾಪುರದ ಬಗ್ಗೆ ಬರೆಯಬೇಕೆಂದರೆ ಮನಸ್ಸು ಹಿಂದಿನದನ್ನೆಲ್ಲ ನೆನೆಯುತ್ತದೆ. ಭ್ರಾತೃಕಲಹವನ್ನೆಬ್ಬಿಸಿದಂತೆ ವಿಜಾಪುರವೇ ವಿಜಯನಗರವನ್ನು ನೆಲಸಮ ಮಾಡುವದಕ್ಕೆ ಕಾರಣವಾಗಲಿಲ್ಲವೇ? ಇಲ್ಲಿಯ ಆದಿಲಶಾಹಿ ಅರಸರಲ್ಲೊಬ್ಬನು ಪ್ರೀತಿಸಿದ ರಂಭಾವತಿಯ ಮೂಲಕ, ಇಂತಹ ಇನ್ನಿತರರ ಮೂಲಕ ಇನ್ನೊಂದು ಭಾಷೆಯಾಡುವ ಕರ್ತೃತ್ವಶಾಲಿಗಳ ಉಪಯೋಗವು ಈ ಅರಸರ ದೃಷ್ಟಿಗೆ ಬಿದ್ದು ವಿಜಾಪುರ ರಾಜ್ಯದಲ್ಲಿ ಮರಾಟಿಯ ಪ್ರಸ್ಥವು ಬೆಳೆಯಲಿಲ್ಲವೆ? ಹಿಂದೂ ಸಂಸ್ಕೃತಿಯನ್ನುಳಿಸಿ ತನ್ನದನ್ನು ಬೆಳೆಸಿದ್ದರೆ ಆದಿಲಶಾಹಿಯು ಇನ್ನೂ ಪೂಜ್ಯವಾಗುತ್ತಿತ್ತು; ಆದರೆ ಆದಿಲಶಾಹಿಯುವರು ಅಷ್ಟೊಂದಾಗಿ ಹಾಗೆ ಮಾಡಲಿಲ್ಲ. ಕೊನೆಗೆ ಚಾಂದಬೀಬಿಯ ಕಾಲಕ್ಕೆ ಮಹಮ್ಮದೀಯ ಶಕ್ತಿಯೇ ಮಹಮ್ಮದೀಯ ಶಕ್ತಿಯನ್ನು ಮುಳುಗಿಸಿತು; ವಿಜಾಪುರದ ಕೋಟೆಕೊತ್ತಳಗಳನ್ನು ಹಾಳಾಗಿಸಿತು.

ತೊರವಿಯ ರಾಜಮಾರ್ಗದಿಂದ ವಿಜಾಪುರಕ್ಕೆ ಹೋಗುವಾಗ ದಟ್ಟ ಮಂಜಿನಂತೆ, ನಿಶ್ಚಲನೀರದದಂತೆ, ಮಹಾವೃಕ್ಷದಂತೆ ರಸ್ತೆಯ ತುತ್ತತುದಿಗೆ ವಿಜಾಪುರದ ಗೋಳಗುಮ್ಮಟವು ಜೋತುಕೊಂಡಿರುತ್ತದೆ. ಇದೇನೆಂದು ನಾವು ಕಣ್ಣೊರಸಿ ಇನ್ನಿಷ್ಟು ದಿಟ್ಟಿಸಿ ನೋಡುತ್ತೇವೆ. ಇದೊಂದು ಮಹಾ ಮಂದಿರವಾಗಿರಬೇಕೆಂದು ಮನಸ್ಸಿಗೆ ಭರಬರುತ್ತ ಹೊಳೆಯುತ್ತದೆ. ಕೊನೆ

ಗೊಮ್ಮೆ ಚಿತ್ರದಲ್ಲಿ ನೋಡಿದಷ್ಟು ಆಕಾರದ ಗೋಳಗುಮ್ಮಟವು ಬಂದು ಕಣ್ಣೆದುರು ನಿಲ್ಲುತ್ತದೆ. ವಿಜಾಪುರದಲ್ಲಿ ನಾವು ನೋಡತಕ್ಕಂಥ ಅತ್ಯುತ್ತಮ ಸ್ಥಳವೆಂದರೆ,—ಒಂದು ಗೋರಿ. ಆದರೆ ಇದಕ್ಕಾಗಿ ನಾವು ನಾಚಿಕೆಪಡ ಬೇಕಾಗಿಲ್ಲ. ತಾಜಮಹಲಿನಲ್ಲಿ ಇನ್ನೇನಿದೆ ಮಣ್ಣು? ಆದರೂ ಆತ್ಮವು ಬಯಲಾಗಲು ಉಳಿದ ದೇಹವನ್ನು ಸೂಚಿಸಲು ವೀರಗಲ್ಲುಗಳನ್ನೂ ಪರಮಾತ್ಮನ ನಿವಾಸವನ್ನು ಸೂಚಿಸಲು ಸುಂದರತಮ ದೇವಾಲಯುಗಳನ್ನೂ ನಿರ್ಮಿಸಿದ ಕಲಾಬುದ್ಧಿಯಲ್ಲಿ ಒಂದು ಹೆಚ್ಚಿನ ಔಚಿತ್ಯವಿಲ್ಲವೆ?

ವಿಜಾಪುರವೊಂದು ಹಾಳು ಪಟ್ಟಣ. ಇಲ್ಲಿ ಹಾಯ್ದಾಡಿದಾಗೊಮ್ಮೆ ಹಿಂದಿನ ಇತಿಹಾಸವನ್ನು ನೆನೆಯದೆ ಸಾಧ್ಯವಿಲ್ಲ. ಅದಿಲಶಾಹಿಯವರು ಕಟ್ಟಿಸಿದ ಕೆರೆಬಾವಿಗಳು ಇಂದಿಗೂ ಊರಿಗೆ ನೀರು ಪೂರೈಸುತ್ತವೆ. ಇಲ್ಲಿ ನೋಡಿದಲ್ಲೆಲ್ಲ ಹಾಳಾದ ಕೋಟೆಕೊತ್ತಲಗಳು ಕಣ್ಣಿಗೆ ಬೀಳುತ್ತವೆ. ಸತ್ತು ಬಿದ್ದ ಘಟಸರ್ಪದಂತೆ ಇನ್ನೂ ಕೋಟೆಯ ಗೋಡೆಯು ಊರನ್ನೆಲ್ಲ ಸುತ್ತಿದೆ. ಕುಸಿದು ಬಿದ್ದ ಗೋಡೆಗಳನ್ನೂ ಕಲ್ಲುಕಮಾನುಗಳನ್ನೂ ಮುಗಿಲಿಗೆ ನೀಡಿ ಇಲ್ಲಿಯ ಗಗನಮಹಾಲು ಅಸಹಾಯವಾಗಿ ನಿಂತು ಕೊಂಡಿದೆ. ಹಿಂದೆ ಅರಸರು ಇದನ್ನು ಸಂಗೀತಕ್ಕಾಗಿ ಉಪಯೋಗಿಸು ತ್ತಿದ್ದರು; ಇಂದು ಬಹುಶಃ ಗೂಗೆಗಳು ಇಲ್ಲಿ ಜೋಗುಳವನ್ನು ಹಾಡುತ್ತಿರ ಬಹುದು. ಗಗನಮಹಲಿನಲ್ಲಿದ್ದ ವಿಶಾಲವಾದ ವೇದಿಕೆಯನ್ನು ಸಾರ್ವ ಜನಿಕ ಸಭೆಗಳಿಗಾಗಿ ಉಪಯೋಗಿಸಬಹುದೆಂದು ಅದನ್ನು ನೋಡಲು ಬಂದ ಒಬ್ಬ ಸಾಹಿತಿಗಳು ನನ್ನ ಕಿವಿಯಲ್ಲುಸುರಿದರು. ಹಾಗೆ ಮಾಡುವುದಕ್ಕಿಂತ ಮೊದಲು ಬೀಳುತ್ತಿರುವ ಕಲ್ಲುಗೋಡೆಗಳನ್ನು ಕೆಡವಬೇಕು ಇಲ್ಲವೆ ಸರಿ ಪಡಿಸಬೇಕು. ಅಂತ್ಯಸಂಸ್ಕಾರವಾಗದೆ ಓಣಿಯಲ್ಲೆಲ್ಲ ಬಿದ್ದ ಹೆಣಗಳಂತೆ ಹಾಳಾದ ಅನೇಕ ಕಟ್ಟಡಗಳು ಊರಲ್ಲೆಲ್ಲ ವಿದ್ರೂಪವಾಗಿ ನಿಂತಿವೆ. ಇವು ಗಳನ್ನು ಇಲ್ಲದಾಗಿಸಿ ವ್ಯವಸ್ಥಿತವಾಗಿದ್ದ ಕಟ್ಟಡಗಳ ಮೇಲೆ ಸರಕಾರದವರು ಇನ್ನಷ್ಟು ದುಡ್ಡು ಖರ್ಚುಮಾಡಬೇಕು. ಆದರ ಸರಕಾರಕ್ಕೆ ದರಕಾರವೆಲ್ಲಿ? ಜನರಿಗೆ ಶಕ್ತಿಯೆಲ್ಲಿ?

ಇನ್ನೂ ಅಚ್ಚಳಿಯದಿದ್ದ ಕಟ್ಟಡಗಳು ಇಲ್ಲಿವೆ. ಜುಮ್ಮಾಮಸೀದಿ, ಇಬ್ರಾಹಿಂರೋಜಾ, ಉಪಲಿ ಬುರುಜು, ಆಸಾರಮಹಾಲು,—ಇವೆಲ್ಲ

ನೋಡತಕ್ಕವು. ತನ್ನ ಮೈ ತನಗೇ ಭಾರವಾಗಿ ಸರಿಯಲಾಗದೆ ವಿಷದಂತವೂ ಹೋದ ಸರ್ಪವು ಬಿದ್ದುಕೊಂಡಂತೆ ಮುಲಕ ಮೈದಾನ ತೋಪು ಕೋಟೆಯ ಒಂದು ಭಾಗದ ಮೇಲೆ ಬಿದ್ದುಕೊಂಡಿದೆ. ಉಪ್ಪಲಿಬುರುಜನ್ನು ಹತ್ತಿ ನೋಡಿದಾಗ ಸುತ್ತುಮುತ್ತಿನ ದೇಶವೆಲ್ಲ ಕಾಣುತ್ತದೆ. ಎಂಥ ದೇಶವದು! ಅಲ್ಲಿ ಕಾಣುವ ಜಲಾಶಯವೆಂದರೆ ಭೂತನಾಳ ಕೆರೆಯೊಂದು. ಅಂತೂ ಇಂತೂ ಗುಡ್ಡ ದಿನ್ನೆಗಳ ಬೆನ್ನಿಗೆ ಬಿದ್ದು ಅದು ತನ್ನ ಜೀವವನ್ನು ಕಾಪಾಡಿ ಕೊಂಡಿದೆ. ಉಳಿದ ಕಡೆಯೆಲ್ಲ— ಅಲ್ಲಲ್ಲಿ ತಲೆಯೆತ್ತಿ ನಿಂತಿರುವ ಮಸೀದೆ ಗಳನ್ನು ಬಿಟ್ಟರೆ—ಬರಿ ನೆಲವು ಶೂನ್ಯದಂತೆ ಸಮವಾಗಿ ಹಬ್ಬಿದೆ.

ಇಲ್ಲಿಯ ಕಲ್ಲುಕೆತ್ತನೆಯ ಕೆಲಸದಲ್ಲಿ ವಿಲಾಸವು ಅಷ್ಟೊಂದಿಲ್ಲ; ವಿಷಾದವು ಮಾತ್ರ ಮನೆಮಾಡಿಕೊಂಡಿದೆ. ಇಲ್ಲಿಯ ಕಲ್ಲಿನ ಗುಣವೇ ಇದಕ್ಕೆ ಕಾರಣವಾಗಿರಬೇಕು. ಇಲ್ಲಿಯ ಕಟ್ಟಡಗಳ ವೀರ ಧೀರ ಕಮಾನು ಗಳಲ್ಲಿ ಗಂಡುತನದ ಘಮಿಂಡಿಯಿದೆ, ಹೆಣ್ಣುತನದ ಮಾರ್ದವವಿಲ್ಲ. ಗೋಳ ಗುಮ್ಮಟದ ಕಮಾನುಗಳಲ್ಲಿ ಸಹ ಇದೇ ಮಾತು ನಿದರ್ಶನಕ್ಕೆ ಬರುತ್ತದೆ. ಹೊರಗಿನಿಂದ ನೋಡಿದರೆ ಸೌಂದರ್ಯದ ಸುಕುಮಾರಾವಸ್ಥೆಯಲ್ಲಿರುವಂತೆ ಕಾಣುವ ಈ ಕಟ್ಟಡವು ಒಳಗೆ ಹೋಗಿ—ಮೇಲೆ ಹೋಗಿ—ನೋಡಿದಾಗ ಅದ್ಭುತರಮ್ಯವಾಗಿ, ಭಯಾನಕವಾಗಿ ಕಾಣುತ್ತದೆ.

ಗೋಳಗುಮ್ಮಟವಿದುವೆ ಮುಗಿಲು, ಬುದ್ಧಿಗೆ ದಿಗಿಲು.
ಕೆಳಗೆ ಬಿದ್ದರೆ ಮಣ್ಣಿನಲಿ ಮಣ್ಣು, ಬೇರಿಲ್ಲ.
ಧ್ವನಿಗಳಲೆಗಳು ದಿಗಂತಕೆ ಹಬ್ಬಿದಾ ಮಿಗಿಲು
ಇಲ್ಲಿಹುದಸಂಖ್ಯಾಕ ಚಿಕ್ಕೆಗಳು ಇಲ್ಲಿಲ್ಲ—
ವೇನು,—ಕಿವಿನುಡಿ ತನ್ನತನವ ಕಾಯ್ದಿರಲಿಂತು,
ಮತ್ತೆ ಎಣಿಕೆಯ ಮೀರಿ ದನಿಯಿಲ್ಲಿ ತಿಂತಿಣಿಸೆ?
ಸಪ್ತಗ್ರಹಗಳ ತೆರದಿ ಮಾರ್ನುಡಿಯಿದೋ ಬಂತು!
ಡಬ್ಬಿಟ್ಟ ಮುಗಿಲ ಕೊಪ್ಪರಿಗೆ,—ಸನಿಯದೊಳಿಣಿಸೆ!
ಗೋಳಗುಮ್ಮಟವಿದನು ಬಿಟ್ಟು ಬಾ ಬಯಲಲ್ಲಿ.
ಹೊರಗಿಲ್ಲಿ ಗಾಳಿ ಕೊರಲನ್ನೆ ಕದ್ದೊಯ್ಯುವದು.

ಗೊಮ್ಮಟೇಶ್ವರನಂತೆ ಹಿಗ್ಗಿ ಜೀವವದಿಲ್ಲಿ
ಬೆಳೆದು ನಕ್ಷತ್ರಮಂಡಲವನಾರಯ್ಸುವದು.
ಸತ್ತವರ ಮೇಲಿಟ್ಟ ಗುಮ್ಮಟವು ಬರಿ ಮಣ್ಣು.
ಜೀವನಿಗೆ ಮುಡುಪಿಟ್ಟ ನಭಕೆ ತೆರೆವುದು ಕಣ್ಣು.

ಮಾತುಮಾತಿಗೆ ಮಾರ್ನುಡಿಯುವ ಈ ಗುಮ್ಮಟವನ್ನು ಕಂಡು ಅನೇಕರು ಇದನ್ನು 'ಬೋಲಗುಮ್ಮಟ'ವೆನ್ನುತ್ತಾರೆ. ಚಿತ್ರವಿಚಿತ್ರವಿಲ್ಲದೆ ಹೊರಗಿನಿಂದ ಬರಿ ಬೋಳುಬೋಳಾಗಿ ಕಾಣುವ ಗುಮ್ಮಟವನ್ನು ನೋಡಿ 'ಬೋಳುಗುಮ್ಮಟ'ವೆಂದು ಹಲವರು ಹೇಳುತ್ತಾರೆ. ಆದರೆ ಇದು ನಿಜವಾಗಿ ನೋಡಿದರೆ ಒಂದು ದೃಷ್ಟಿಯಿಂದ ಕನ್ನಡಿಗರ ಗೋಳಗುಮ್ಮಟವಾಗಿದೆ. ಇದನ್ನು ನಿಲ್ಲಿಸಲು ಎಷ್ಟು ಜನ ಕನ್ನಡ ಕೂಲಿಕಾರರು ಎಷ್ಟು ವರ್ಷಗಳವರೆಗೆ ದುಡಿದರೋ ಯಾರಿಗೆ ಗೊತ್ತು!

ವಿಲಾಯತಿಯ ಒಂದು ಪ್ರಖ್ಯಾತ ಪಟ್ಟಣದಲ್ಲಿ Martyrs Memorial, ಅಂದರೆ ಧರ್ಮವೀರರ ಸ್ಮಾರಕಸ್ತಂಭವೊಂದಿದೆ. ಇದರ ತುದಿಯು ಕಳಸದಂತೆ ನಿಡಿದಾಗುತ್ತ ಹೋಗಿದೆ. ಇದರ ನಿಲುವಿಕೆಯು ದೀಪಸ್ತಂಭದಂತೆ ಎತ್ತರವಾಗಿದೆ. ಇದರ ತುದಿಯವರೆಗೆ ಏರಿಹೋಗುವದೆಂದರೆ ಸಾಹಸಿಗೂ ಸಾಹಸವಾಗಿ ಪರಿಣಮಿಸುವದು. ಇಂಥದರ ಮೇಲೆ ಒಂದು ರಾತ್ರಿ ಒಬ್ಬ ವಿದ್ಯಾರ್ಥಿಯು ಏರಿಹೋಗಿ ತುದಿಗೆ ಮಲಪಾತ್ರೆ (Chamber-pot) ಯನ್ನು ಡಬ್ಬುಹಾಕಿನದಂತೆ. ಮರುದಿನ ಮುಂಜಾನೆ ಊರಿಗೆ ಊರೇ ಈ ಅದ್ಭುತವನ್ನು ನೋಡಲು ನಿಂತಿತು. ಛಾಯಾ ಚಿತ್ರಕಾರರು ಅದರ ಫೋಟೋ ತೆಗೆದಿಟ್ಟರು. ಆ ಫೋಟೋದ ಸಾವಿರಾರು ಪ್ರತಿಗಳು ಮಾರಿದವು. ಆ ಊರಿಗೆ ಬಂದ ಪ್ರವಾಸಿಗಳೆಲ್ಲ ಮೊದಲು ಖ್ಯಾತಿವೆತ್ತ ಆ ಸನ್ನಿವೇಶದ ಸ್ಮಾರಕವಾದ ಫೋಟೋವನ್ನು ಕೊಳ್ಳುತ್ತಿದ್ದರು! ಅಂದಿನ ದಿನ ಆ ಪಾತ್ರೆಯನ್ನು ತೆಗೆದಿಟ್ಟವರಿಗೆ ದೊಡ್ಡ ಇನಾಮು ಕೊಡುವುದಾಗಿ ಅಧಿಕಾರಿಗಳು ಜಾಹೀರು ಮಾಡಿದರು. ಆದರೆ ಅದು ಯಾರಿಗೂ ಸಾಧ್ಯವಾಗಲಿಲ್ಲ. ಪಾತ್ರೆಯನ್ನು ತೆಗೆಯಲು ಪ್ರಯತ್ನಿಸುವಲ್ಲಿ ಆ ಕಳಸವೇ ಕಡಿದು ಬೀಳಬಹುದಾಗಿತ್ತು. ಆಗ ಅಧಿಕಾರಿಗಳು,—ಈ

ಕೆಲಸವನ್ನು ಯಾರೇ ಮಾಡಿರಲಿ; ಇಂದು ರಾತ್ರಿ ಅವರೇ ಆ ಪಾತ್ರೆಯನ್ನು ತೆಗೆದಿಟ್ಟರೆ ಅವರ ಅಪರಾಧವನ್ನು ಮನ್ನಿಸಲಾಗುವದೆಂದು ಪ್ರಕಟಿಸಿದರು. ಆಗ ಪಾತ್ರೆಯನ್ನು ಮೇಲಿರಿಸಿದ ವಿದ್ಯಾರ್ಥಿಯು ಮತ್ತೆ ಅದನ್ನು ತೆಗೆದಿಟ್ಟ. ಅವನಾರೆಂಬದು ಯಾರಿಗೂ ಗೊತ್ತಾಗಲಿಲ್ಲ. ಇದು ಹೊಸಕಾಲದಲ್ಲಿ ಬೆಳೆದ ದೇಶದಲ್ಲಿ ಸಂಭವಿಸಿದ ಸಂಗತಿ.

ಗೋಳಗುಮ್ಮಟವನ್ನು ಕಟ್ಟಿಸಿದ ಸುಲ್ತಾನನು ಗುಮ್ಮಟದ ಮಧ್ಯಬಿಂದುವಿನಿಂದ ದೀಪವನ್ನು ಇಳಿಬಿಡಲು ಕಬ್ಬಿಣದ ಕೊಕ್ಕೆಯನ್ನು ಕೂಡಿಸಬೇಕೆಂದು ಮನಸ್ಸು ಮಾಡಿದನಂತೆ. ಹೀಗೆ ಕೂಡಿಸಿಕೊಟ್ಟವರಿಗೆ ದೊಡ್ಡ ಇನಾಮನ್ನು ಕೊಡಲಾಗುವದೆಂದು ಸುಲ್ತಾನನು ಸಾರಿದನು. ಸೆರೆಮನೆಯಲ್ಲಿ ಕೊಳೆಯುತ್ತಿದ್ದ ಸಾಹಸಿಯೊಬ್ಬನು ಆ ಕೆಲಸವನ್ನು ಮಾಡಿ ತೋರಿಸಿದಾಗ,—ಸುಲ್ತಾನನು ಅವನಿಗೆ ಇನಾಮು ಕೊಟ್ಟು,—ನಿನ್ನಂಥವನು ನನ್ನ ರಾಜ್ಯದಲ್ಲಿರುವದು ಅಪಾಯಕರವೆಂದು ಗುಂಡು ಹಾಕಿ ಕೊಂದುಬಿಟ್ಟನಂತೆ! ಇದು ಹಳೆಯ ಕಾಲದ ಬೇಬಂದಶಾಹಿಯ ರೀತಿ.

ಗೋಳಗುಮ್ಮಟದ ವಸ್ತುಸಂಗ್ರಹಾಲಯದಲ್ಲಿ ಅನೇಕ ಐತಿಹಾಸಿಕ ಚಿತ್ರಪಟಗಳಿವೆ. ಔರಂಗಜೇಬನು ವಿಜಾಪುರದ ಕೋಟೆಗೆ ಹಾಕಿದ ಮುತ್ತಿಗೆಯ ಚಿತ್ರವು ನೋಡುವ ಹಾಗಿದೆ. ಕಲ್ಲಿನಲ್ಲಿ ಕಟೆದ ರುಂಡವೊಂದು ಇಲ್ಲಿದೆ. ರಕ್ಕಸತಂಗಡಿ ಕಾಳಗದಲ್ಲಿ ಸಿಕ್ಕ ರಾಮರಾಜನ ತಲೆಯಂತಹ ಪ್ರತಿಮೆಯೊಂದನ್ನು ಅದಿಲಶಾಹಿ ಸುಲ್ತಾನನು ಮಾಡಿಸಿದನು; ಅದೇ ಇದೆಂದು ಇಲ್ಲಿ ವದಂತಿಯಿದೆ. ಈ ಕಲ್ಲಿನ ರುಂಡದ ಹತ್ತಿರ ನಿಂತಾಗ ಅನೇಕ ಕಾದಂಬರಿಗಳು ತಲೆಯಲ್ಲಿ ಹಾದು ಹೋಗುತ್ತವೆ!

ಇಲ್ಲಿಯವರೆಗೆ ಇತಿಹಾಸದ ವಿಷಯವನ್ನೇ ಹೇಳಿದೆನು. ಆದರೆ ವಿಜಾಪುರದ ವಿಷಯದಲ್ಲಿ ಇನ್ನೇನನ್ನು ಹೇಳಬಹುದು? ಕುಮಾರ ವಾಲ್ಮೀಕಿಯು ಇಲ್ಲಿಯವನು. ನಾಗಚಂದ್ರನು ಇದೇ ಊರಿನವನು. ಆದರೆ ಅದಿಲಶಾಹಿಯ ಕಾಲದಿಂದ ಇಲ್ಲಿ ಮರಣಶಯ್ಯೆಯನ್ನು ಹಿಡಿದಿದ್ದ ಕನ್ನಡವು ಈಗ ಎದ್ದು ಕುಳಿತಿದೆ. ಶಿಕ್ಷಕರು, ವಕೀಲರು, ಪತ್ರಿಕಾಸಂಪಾದಕರು, ನಾಟ್ಯವಿಲಾಸಿಗಳು, ಕಲಾಪ್ರಿಯರು, ಸಾಹಿತಿಗಳು, ಉತ್ಸಾಹಿ ತರುಣರು,—ಇವರೆಲ್ಲ ಇಂದು ಕನ್ನಡದ ಕೆಲಸವನ್ನು ಇಲ್ಲಿ ಮುಂದುವರಿಸಿದ್ದಾರೆ. ಸಾಹಿತ್ಯ

ಸಮ್ಮೇಲನದ ಅಧ್ಯಕ್ಷಪದವಿಯ ಶ್ರೇಯಸ್ಸು ಒಮ್ಮೆ ವಿಜಾಪುರಕ್ಕೆ ದೊರತಿದೆ. ಹಾಳಿನಲ್ಲಿ ಹುದುಗಿಕೊಂಡಿದ್ದ ಬಾಳು ಇಂದು ಚಿಗುರುತ್ತಲಿದೆ.

ರಾಮದುರ್ಗದ ದುರಂತವು ವಿಜಾಪುರವನ್ನೂ ಬಡಿದುಕೊಂಡಿತ್ತು. ಜಾತಿ-ಜಾತಿಗಳ ಬಡಿದಾಟವು ಎಂದು ಲಯುವಾಗುವದೋ ದೇವರೇ ಬಲ್ಲ. ಜಗಳಾಡುವ ಜನರ ಜಾತಿ ಇರುವವರೆಗೆ ಇದೂ ಉಳಿಯುವ ಹಾಗೆ ತೋರುತ್ತದೆ! ಕಾಲು ಕೆದರಿ ನ್ಯಾಯುವಾಡಬೇಕೆನ್ನುವವರಿಗೆ ಯಾವ ಕುಂಟ ನೆವವೂ ಸಾಕಾಗಬಹುದು; ಜಾತಿಯ ಭೂತವೊಂದೇ ಏಕೆ? ಆದರೆ ನಾವಿಂದು ಕೇಳಿಕೊಳ್ಳುವುದು ಇಷ್ಟೇ; ಆರ್ಥಿಕ ಇಲ್ಲವೇ ರಾಜಕೀಯ ರಂಗದಲ್ಲಿಯ ಅನರ್ಥಗಳು ಸಾಹಿತ್ಯ ಸಂಸ್ಕೃತಿಗಳನ್ನಾದರೂ ಮುಟ್ಟದಿರಲಿ. ಒಂದೆಡೆಗಾದರೂ ನಾವಿಂದು ಮಡಿವಂತರಾಗಿ ಬಾಳೋಣ. ಸಾಹಿತ್ಯ ಲೋಕದಲ್ಲಿ ಕಲಿತ ಸಂಘಟನೆಯಿಂದ, ಸದಾಚಾರದಿಂದ, ಸಮ್ಮಿಲನದಿಂದ ನಾಳೆ ಜೀವನದ ಉಳಿದ ಕ್ಷೇತ್ರಗಳಲ್ಲಿಯಾದರೂ ತಿಳುವಳಿಕೆಯು ಹಬ್ಬೀತು. ಸಾಹಿತ್ಯರಂಗವಾದರೂ ಪ್ರವಿತ್ರ ಪ್ರಯೋಗಶಾಲೆಯೆಂದು ನಾವು ಬಗೆಯೋಣ. ಇಲ್ಲಿಯೂ ರಾಡಿಯನ್ನೊಗೆದು ಬಾವಿಯನ್ನು ತುಂಬಿ ಕೊಳಚಿಯೆಂದು ಅದನ್ನೆಬ್ಬಿಸಿದರೆ,—ಮುಂದೇ ಗತಿಯೇನು?

ಹಿಂದೆ ವಿಜಾಪುರದಲ್ಲಿ ಶಿಲ್ಪಿಗಳಿದ್ದರೇನು? ಈ ಪ್ರಶ್ನೆಯನ್ನು ಗೋಳ ಗುಮ್ಮಟದ ಸನಿಯಕ್ಕೆ ನಿಂತು ಕೇಳಬೇಕು,—ಅಂದರೆ ಆ ಕಟ್ಟಡವನ್ನು ಪ್ರವೇಶಿಸಿ ಮೇಲೇರಿ ಗುಮ್ಮಟದ ಹತ್ತಿರ ನಿಂತು

ಹಿಂದೆ ನಮ್ಮ ನಾಡಿನಲ್ಲಿ
ಬಾಳಿದರೇ ಶಿಲ್ಪಿಗಳೂ?
ಶಿಲ್ಪಿ! ಶಿಲ್ಪಿ! ಶಿಲ್ಪಿಯೆಂದು ಧ್ವನಿಗಳಲೆದವು.
ನಿನ್ನೆಯ ಸಿರಿಯೆಲ್ಲ ಜಲ್ಪ-
ವೆಂದರಿಂದು ಹುಟ್ಟಿದಲ್ಪ
ಮತಿಗಳೆನುತ ಸಾರಿ ಕೆಣಕುವಂತೆ ಕೆಲೆದವು!

ಆಗ ಮನದಿ ನೊಂದು ನಾವು
ಶಿಲ್ಪಿಗಳಿರ! ನಿಜವು. ನೀವು
ಇಲ್ಲಿ ವಾಸಿಸುವಿರಿ. ನಿಮಗೆ ಮಣಿವೆವೆಂದೆವು.

ನಮಸ್ಕಾರ ! ನಮಸ್ಕಾರ !
ನಮೋನ್ನಮಃ ! ನಮಸ್ಕಾರ—
ವೆಂಬ ಮೇಳ ಕಿವಿ ತುಂಬಲು ಹೊರಗೆ ಬಂದೆವು !

ಇದೇ ರೀತಿಯಾಗಿ 'ಇಂದು ಕನ್ನಡವು ಎಚ್ಚತ್ತಿದೆಯೆ ?' ಎಂಬ ಪ್ರಶ್ನೆಯನ್ನು ವಿಜಾಪುರಕ್ಕೆ ಕೇಳಿದರೆ 'ಎಲ ! ಎಚ್ಚರಿಯದೆ ಏನು ?' ಎಂದು ಇಡೀ ವಿಜಾಪುರವೇ ಎದ್ದು ನಿಂತು ಉತ್ತರ ಕೊಡುತ್ತದೆ.

—ಶ್ರಾಂತಿಪ್ರಿಯ

---

# ಹಲಸಂಗಿ

ಹಲಸಂಗಿಯು ಇಂಡಿ ತಾಲೂಕಿನೊಳಗಿನ ಒಂದು ಹಳ್ಳಿ. ಆದರೂ ಅದು ಕರ್ನಾಟಕಕ್ಕೆ ಚೆನ್ನಾಗಿ ಪರಿಚಿತವಾಗಿದೆ. "ಹೊಲಸಂಗಿಯ ಗೆಳೆಯು" ರೆಂದು ಹಲಸಂಗಿಯ ಮಿತ್ರರನ್ನು ಕುರಿತು ಕಾರಂತರು ನಗೆಯಾಡಿದರು. ಹಲಸಂಗಿಯು ಉತ್ತರಕರ್ನಾಟಕದ ಆಗಸೆಯೆಂದರು ಗೋಕಾಕರು. "ಹಲವು ಸಂಗಿಗಳಿಂದ ಕೂಡೇದ ಕೋಲ" ಎಂದು ಮುಗುಳಿಯವರು ಹಲಸಂಗಿಯನ್ನು ಬಣ್ಣಿಸಿದರು. "ಗರತಿಯ ಹಾಡಿ"ನ ಜೋಗುಳವನ್ನು ಹಲಸಂಗಿಯೇ ಹಾಡಿತು ; ಕನ್ನಡತಾಯಿಗೆ 'ಮಲ್ಲಿಗೆ ದಂಡೆ' ಮುಡಿಸಿತು ; ಕನ್ನಡಮ್ಮನ ಕೊರಳಿಗೆ "ಅರವಿಂದ ಗ್ರಂಥಮಾಲೆ"ಯನ್ನು ಹಾಕಿತು. "ಜೀವನ ಸಂಗೀತ" ದಂಥ ಹಳ್ಳಿಯ ಶೃಂಗಾರವು ಹಲಸಂಗಿಯ ಆಗಸೆಯಿಂದಲೇ ಹಣಿಕಿ ಹಾಕಿತು. ವರಕವಿ ಖಾಜಾಭಾಯಿಯ ನಿಸರ್ಗಕವಿತೆಯ ಲಾವಣ್ಯವು ಹಲಸಂಗಿಯಿಂದಲೇ ರಂಜಿಸಿತು. ಚೆನ್ನಮಲ್ಲನ "ನನ್ನ ನಲ್ಲ" ನನ್ನು "ನನ್ನ ದಲ್ಲ" ವೆಂದು ಯಾವ ಕನ್ನಡಿಗನೂ ಅನ್ನಲಾರನು.' ಚಿತ್ರದಲ್ಲಿಯ ಕವಿತೆಯನ್ನೂ, ಕವಿತೆಯಲ್ಲಿಯ ಚಿತ್ರವನ್ನೂ ಓದದ ಕನ್ನಡಿಗರಾರಿದ್ದಾರೆ ? ಮುಗುಳಿಯವರ ಕೋಲಾಟದ ಹಾಡಿನ "ಜಕ್ಕವ್ವ ಜಾಣಿ" ಹಲಸಂಗಿ

ಯವಳೇ. 'ಮಿಲನ'ದ ಮಾಧುರ್ಯ, 'ಜೀವನದ ಚಾತುರ್ಯ' ಇವನ್ನರಿಯಲಿಕ್ಕೂ ಹಲಸಂಗಿಯೇ ಮುಂದಡಿಯಿಟ್ಟಿದೆ. ಇನ್ನು ಕನಸಿನ ನಾಡಿನ ಬಣ್ಣಬಣ್ಣದ ಬಗೆಗಳು ಕನ್ನಡಿಗರ ಕಣ್ಣಮುಂದೆ ಬರಲಿವೆ.

ಹಲಸಂಗಿಯು [illegible]ಸೀಮೆಯಲ್ಲಿ ಇದ್ದುದರಲ್ಲಿಯೇ ಚೆಲುವಾದ ಊರು. ಯಾವ [illegible]ಟ್ಟಿನಿಂದ ಬಂದರೂ, ಅಗಸೆಗೆ ಅಥವಾ ಕೋಟೆಗೆ ಬರುವವರೆಗೆ ಕಾಣಿಸದಂತೆ ತಗ್ಗಿನಲ್ಲಿ ಮಂಡಿಸಿದೆ. ಆದಿಲಶಹಲ ಕಾಲದ ಕೋಟೆಯು ಇಂದಿಗೂ ಕಾವಲಕ್ಕೆ ಕಾಲೂರಿ ನಿಂತಿದೆ. ಊರಲ್ಲಿಯೂ ಊರ ಸುತ್ತುಮ[illegible]ಲೂ ಗಿಡಮರಗಳ ಗುಂಪು; ಮಾವಿನ ತೋಪುಗಳ ದೊಡ್ಡ ದಿನ್ನೆಯ [illegible]ಡಿಯಲ್ಲಿ ಹರಿಯುವ ಹಳ್ಳ. ಹಳ್ಳದ ದಂಡೆಯು ಮರಡಿಯಲ್ಲಿ ತುರುಬಿಸಿಕೊಂಡು ನಿಂತ ಬಂಡೆಗಲ್ಲುಗಳು ಪರಿಚಿತ ಆಪ್ತರ ನೆನಪು ತಂದು ಕೊಡುವವು. ಹಲಸಂಗಿಯ ಓಣಿಗಳೂ, ಹಾದಿಗಳೂ ನೋಡಿ ನಡೆಯುವ ಪಾಠ ಕಲಿಸುವವು. ಒಟ್ಟು ಕಲ್ಲಿನೂರು, ಕಲ್ಲಿನಡವಿ; ಹಳ್ಳವೂ ಅದೇ. [illegible]ಸಂಗಿ ಇರದೆ, ಕಲ್ಲಸಂಗಿಯೆಂದು ಹೆಸರಿದ್ದರೆ ಒಪ್ಪುತ್ತಿತ್ತೇನೋ. ಆ [illegible]ಗಳಷ್ಟೇ ನವಿಲುಗಳು. ಊರ ಹೊರಗೆ–ಒಳಗೆ, ಮನೆಯ ಮುಂದೆ [illegible]ಗೆಯ ಮೇಲೆ ಎಲ್ಲಿ ನೋಡಿದರೂ ನವಿಲು; ಮರ ಮೋಟ, ಕೋಟೆ [illegible] ಎಲ್ಲೆಲ್ಲಿಯೂ ನವಿಲಿನ ನಿಲವು. ಬೇಂದ್ರೆಯವರೊಮ್ಮೆ ನವಿಲೂರು [illegible]ಂದರು. ಕುಣಿತದ ಕಾರ್ಯಕ್ರಮವನ್ನು ನವಿಲುಗಳು ತಾವಾಗಿಯೆ [illegible] ಇಟ್ಟಿರುವದನ್ನು ಅನೇಕ ಕಡೆ ಕಾಣಬಹುದು. ಮಾರ್ಗಶೀರ್ಷದ [illegible] ನವಿಲುಗರಿಗಳು ಸುತ್ತಲಿನ ಹೊಲತೋಟಗಳಲ್ಲೆಲ್ಲಾ ಸೂರೆ[illegible]ತ್ತವೆ. ಬೇಕಾದವರು ಆರಿಸಿ ತಂದು ಮೋದಪಡಬಹುದು. [illegible]ವೃಷ್ಟಿಗೂ ಅನಾವೃಷ್ಟಿಗೂ ಕೂಡಿಯೇ ಬೆಳೆಬರುವ ಭೂಮಿ ಹಲಸಂ[illegible] ಹುಸುರ್ವೇ ಆದರೂ ಒಳ್ಳೆಯ ನೆಲ್ಲು ಬೆಳೆಯುವದು.

ಇಲ್ಲಿ [illegible]ರು ಕವಿಮು. ಮುಲಕೀಪರೀಕ್ಷೆಯಾದರೆ ಬಹಳ ಆಯ್ತು. ಆದರೆ [illegible]ದಿಯಿಂದಲೂ ಈ ಊರಲ್ಲಿ ಓದಾಳಿಗಳು ಹುಟ್ಟುತ್ತ ಬಂದಿದ್ದಾರೆ. ತಿ[illegible]ಕೆ ಹೆಚ್ಚು. "ಹಲಸಂಗಿಯ ಹಾರುವರು ಧಡ್ಡಲ್ಲ. ಸೋನಕನಹಳ್ಳಿ[illegible] ಬಿಡ್ಡಲ್ಲ" ಎಂಬ ಮಾತು ಇತ್ತ ಕಡೆಯ ಹಳ್ಳಿಗಳಲ್ಲಿ ಬ[illegible]ದೆ. ಹರದೇಸೆ–ನಾಗೇಶಿ ಹಾಡುವವರೂ, ಅಂಥ

ಹಾಡುಗಳನ್ನು ಕಟ್ಟುವ ಕವಿಗಳೂ ತಲೆತಲೆಗಳಿಂದ ಹುಟ್ಟುತ್ತ ಬಂದಿದ್ದಾರೆ. "ಇಜಾಪುರದಾಗ ಇಜಾರದವರೇನು ಕಡಿಮೆ" ಅನ್ನುತ್ತಿರುವಂತೆ "ಹಲಸಂಗಿಯಲ್ಲಿ ಹಾಡುವವರಿಗೇನು ಕಡಿಮೆ" ಎನ್ನಬಹುದಾಗಿದೆ. ಧಾಟಿಯಲ್ಲಿ ಮಾತು ಪೋಣಿಸಿ ಹಾಡುವವರು ಇಂದಿಗೂ ನೂರಾರು ಜನರು ಹೊರಡಬಹುದು. ಸಾಮಾನ್ಯ ಜನರಲ್ಲಿ ತಿಳುವಳಿಕೆಯು ಸಹಜವಾಗಿ ಸೇರಿಕೊಂಡಿದೆ. ಸಹಜ ತಿಳುವಳಿಕೆಯವರಂತೆ ಅಧ್ಯಾತ್ಮಿಗಳೂ, ವೇದಾಂತಿಗಳೂ ಹೆಚ್ಚು. ಎಲ್ಲೆಲ್ಲಿಯು ಚರ್ಚೆಗಳು ಅನೇಕವಾಗಿ ಕಿವಿಗೆ ಬೀಳುವವು. ಆದರೆ ಉಪದೇಶ ಕೊಡುವವರ ಬಲೆಗೆ ಯಾರೂ ಬಿದ್ದಿಲ್ಲವೆನ್ನಬೇಕು. ಓದಾಳಿಗಳ ತಿಳುವಳಿಕೆ, ಕವಿಗಳ ಕಟ್ಟುಗಾರಿಕೆ ಹಾಡುಗಾರರ ಹಾಡುಗಾರಿಕೆ ಈ ಮೂರರ ಮೇಳನದಿಂದ ಸಾಮಾನ್ಯಜ್ಞಾನವು ಸಾಮಾನ್ಯವಾಗಿ ಬಿಟ್ಟಿದೆ. ಯಾವುದೊಂದು ಮಾತುಕಥೆ ತಿಳಕೊಳ್ಳುವ ಜನರು ಹೆಚ್ಚು. ಆದರೆ ಹೆಚ್ಚು ತಿಳಕೊಳ್ಳುವರು. ಮಾತಿಗೊಂದು ಮರುಮಾತು, ಹಾಡಿಗೊಂದು ತೋಡಿ, ಆಟಕೊಂದು ಪಡಿಯಾಟ ಸಲ್ಲಿಸುವುದು ಇಲ್ಲಿಯವರಿಗೆ ಸ್ವಾರಸ್ಯದ ಮಾತಾಗಿದೆ. "ತಿರುಕರ ಪಿಡುಗಿ"ಗೆ "ತಿರುಕರ ಗುಡುಗು" ಮೊಳಗಿದ್ದು ಇದೇ ಊರಲ್ಲಿಯೇ.

ಎರಡು ಸಾವಿರ ಜನಸಂಖ್ಯೆ ಇದ್ದರೂ, ಸರಕಾರಿ ಶಾಲೆ ಇದ್ದುದಃ ೫ನೇ ಇಯತ್ತೆಯ ವರೆಗೇ. ಹೆಚ್ಚಿನ ಶಾಲೆಯನ್ನು ಜನರೂ ಬೇಡಿಲ್ಲ; ಸರ್ಕಾರವೂ ಕೊಟ್ಟಿಲ್ಲ. ಊರ ಕೀರ್ತಿಯಲ್ಲಿದೊಂದು ದೊಡ್ಡ ಕುಂದು. ನುಡಿತಾಯಿಯು ಸಣ್ಣ ಗುಟುಕು ಕುಡಿದೇ ಮರಿ ಹಕ್ಕಿಗಳು ಮುಗಿಲಿಗೆ ಜಿಗಿದಂತೆ, ನಾಡ ತಾಯಿಯ ಕರೆಗೆ ಕುದುರೆಯಾಗಿ ಧಾವಿಸಿದ ಕಟ್ಟಾಳುಗಳೂ ಹಲಸಂಗಿಯಲ್ಲಿ ಇಲ್ಲದಿಲ್ಲ. ೧೯೪೦ ರ ಅಂದೋಲನದಲ್ಲಿ ವಿಜಾಪುರ ಜಿಲ್ಹೆಗೆ ಯಶಸ್ಸು ತಂದು ಕೊಟ್ಟವರಲ್ಲಿ ಹಲಸಂಗಿಯವರೂ ಇದ್ದಾರೆ. ಲೋಕಕಾರ್ಯಕ್ಕಾಗಿ ಅವಿವಾಹಿತವಾಗಿ ಇರುವ ವಿಚಾರವು ಹಲಸಂಗಿಯಲ್ಲಿ ಬಂದು ಹೋದಷ್ಟು ಮತ್ತಾವ ಹಳ್ಳಿಯಲ್ಲಿಯೂ ಇಲ್ಲವೆನ್ನಬೇಕು. ಹಲಸಂಗಿಯ ಹೆಣ್ಣುಮಕ್ಕಳಿಗೆ ನಿರ್ಬಂಧದ ಬುರುಕೆ ಹೆಚ್ಚು ( ಸಾರ್ವಜನಿಕರಲ್ಲಿ ). ಖಾಜಾಭಾಯಿಯ ಹಾಡುಗಾರಿಕೆ ಒಮ್ಮೆ ವಿಕೋಪಕ್ಕೆ ಹೋದಾಗ ಆ ಕವಿರತ್ನವು ಪರ ಊರ ಸೇರಿದಾಗ ಹಲಸಂಗಿ ಕಲಿತ ಪಾಠವನ್ನು ಮರೆಯಲಾಗದು.

ಊರ ಪರಿಸ್ಥಿತಿ ಸಂಸ್ಥಾನದ ರೀತಿಯಂತೆ ಮೈಸೂರಿನ ಮಾದರಿಯದು. ಜನರ ಕೈಗೆ ಕಾರುಭಾರ ಬಂದಿಲ್ಲ. ಅಂತೇ ಜನರಲ್ಲಿ ಹೋರಾಟದ ಹುಮ್ಮಸಿಗಿಂತ ಗಲಭೆಯಿಲ್ಲದ ಕೆಲಸ ಮಾಡುವ ಒಲವು ಹೆಚ್ಚು. ಮುಂದೆ ಬಂದ ಕೆಲಸವನ್ನು ತೂಗಿ ಮಾಗಿ ಸಾವಧಾನದಿಂದ ಮಾಡುವ ರೀತಿ ಇಲ್ಲಿಯವರದು. ಅದು ಕೆಲವರಿಗೆ ಸಡಿಲುತನದ ಪುಕ್ಕತನದ ಲಕ್ಷಣವಾಗಿ ತೋರುತ್ತಿದ್ದರೆ ಅದೂ ಪೂರ್ಣ ಸಟೆಯಲ್ಲ.

ಸಾರ್ವಜನಿಕ ವಾಚನಾಲಯವಿದ್ದರೂ, ಖಾಸಗೀ ಪುಸ್ತಕಗಳ ಸಂಗ್ರಹವು ದೊಡ್ಡ ಲೈಬ್ರರಿಯಂತಾಗಿದೆ. ರೇಲ್ವೆಗೆ ೯ ಮೈಲು, ಲೈನಮಾರ್ಗಕ್ಕೆ ೨ ಮೈಲು ದೂರವಿದ್ದರೂ ಪಟ್ಟಣದ ಗಾಳಿ, ಹೊಸಕಾಲದ ಅಭಿರುಚಿ, ನಿರಾತಂಕವಾಗಿ ಈ ಊರಿಗೆ ಬರಲವಕಾಶವಾಗಿದೆ. ಇಲ್ಲಿಯ ತರುಣರ ಕಾರ್ಯ ಊರಿಗೆ ಅರಿಕೆಯಿಲ್ಲವಾದರೂ ಇವರು ಮಾಡುವ ಯಾವುದೇ ಕಾರ್ಯ, ಹೂಡುವ ಯಾವುದೇ ಆಟ ಬಹಳ ಬೆರಗುಗೊಳಿಸತಕ್ಕವು. ಶ್ರೀರಾಮಕೃಷ್ಣ ಪರಮಹಂಸರ ಶತವಾರ್ಷಿಕ ಉತ್ಸವವು ಕರ್ನಾಟಕದಲ್ಲಿ ಬಹುಶಃ ಎಲ್ಲಿಯೂ ಆಗದೆ–ಹಲಸಂಗಿಯಲ್ಲಿ ಆದಾಗ ಬಂದ ಮಾನ್ಯ ಅತಿಥಿಗಳು ಅಗಾಧಪಟ್ಟರು. ಎರಡು ವರ್ಷಗಳಿಂದ ಹೂಡಿದ ನಾಡಹಬ್ಬದ ಪದ್ಧತಿಯು ಕರ್ನಾಟಕಕ್ಕೆ ಹೊಸದು. ಇಂದಿಲ್ಲ ನಾಳೆ–ಬಹು ಊರ ಜನರಿಗೆ ಆದರಣೀಯವಾಗಬಹುದು.

ಮಹಾತ್ಮರ ಜೀವನದ ನವವಿಚಾರ, ಪರಮಹಂಸರ ಸರ್ವಧರ್ಮ ಸಮನ್ವಯದೃಷ್ಟಿ, ಏ. ಈ. ಅವರ ಪ್ರಕೃತಿ ಮಾತೆಯೊಡನೆ ತಾದಾತ್ಮ್ಯ, ಶ್ರೀ ಅರವಿಂದ ಯೋಗಿಗಳ ದಿವ್ಯ ಜೀವನದ ಉಸಿರು ಇವೆಲ್ಲವೂ ಇಲ್ಲಿಯ ವಾತಾವರಣದಲ್ಲಿ ಬಂದು ಬೆರೆತಿವೆ. ಕಲಿತವರಲ್ಲದಿದ್ದರೂ ಇಲ್ಲಿಯ ತರುಣರ ಕುರುಡಕಣ್ಣಿಗೆ ಬರುವ ಬೆಳಕಿನ ಉಗಮಸ್ಥಾನಕ್ಕೆ ನನ್ನದೊಂದು ನಮಸ್ಕಾರ ಮಾಡಿ ಹಲಸಂಗಿಯ ಪರಿಚಯವನ್ನು ಮುಗಿಸುತ್ತೇನೆ.

—ಸಿಂಪಿ ಲಿಂಗಣ್ಣ

# ಚಡಚಣ

ಹಲಸಂಗಿಗೆ ಕನ್ನಡತನವು ಹೆಚ್ಚು; ಆದರೆ ಚಡಚಣಕ್ಕೆ ಭಾರತೀಯತೆ ಮೆಚ್ಚು. ಅದಕ್ಕೆ ಸಾಹಿತ್ಯದ ಸ್ಥಾನ; ಇದಕ್ಕೆ ಚಳವಳಿಯ ಮಾನ. ವಿಜಾಪುರ ಜಿಲ್ಲೆಗೆ ಚಡಚಣವೊಂದು ಮೂಗು. ಚಡಚಣವು ಸಿಂಧೆಯ ಕಾಲದಲ್ಲಿ ಮಹಾಲಕರಿಯ ಸ್ಥಳವಾಗಿತ್ತು. 'ಚಡಿತಾಣ' ವೆಂದು ಶಿಲಾಲಿಪಿಯಲ್ಲಿ ಉಲ್ಲೇಖವಿದೆ. ಇಂಡಿ ತಾಲೂಕದೊಳಗಿನ ಒಂದು ಹಿರಿಹಳ್ಳಿ; ೩-೪ ಸಾವಿರ ಜನಸಂಖ್ಯೆ. ಕಾಂಗ್ರೆಸಿನವರ ಆಳಿಕೆಯಲ್ಲಿ ತಾಲೂಕಿನ ಸ್ಥಾನ ಮಾನಗಳೆಲ್ಲ ಚಡಚಣಕ್ಕೆ ಬಂದಿವೆ. ತಾಲೂಕ ಕಾಂಗ್ರೆಸ ಕಚೇರಿ ಮಾತ್ರ ಚಡಚಣದಲ್ಲಿದ್ದರೂ, ಒಮ್ಮೊಮ್ಮೆ ಜಿಲ್ಲೆಯ ಚಳವಳಿಗಳಿಗೂ ಚಡಚಣವೇ ಕೇಂದ್ರ. ೧೯೩೦ ರಲ್ಲಿ ಸೆರೆಮನೆಗೆ ಸೇರಿದವರ ಸಂಖ್ಯೆಯು ಮತ್ತೊಂದೂರಲ್ಲಿ ಬಹುಶಃ ಸಿಕ್ಕದು. ಜನಸಂಖ್ಯೆಯ ಮಾನದಿಂದ ವಿಜಾಪುರದ ಸತ್ಯಾಗ್ರಹಿಗಳಿಗಿಂತ ಚಡಚಣದವರ ಸಂಖ್ಯೆಯೇ ಹೆಚ್ಚು. ವಿಜಾಪುರ-ಸೊಲ್ಲಾಪುರ-ಪಂಢರಪುರಗಳಿಗೆ ಮಧ್ಯವರ್ತಿಯಾದ ಊರು. ದಿನಾಲು ಆ ಮೂರು ಪುರಗಳಿಗೆ ಹೋಗಿ ಬರುವ ಮೋಟಾರುಗಳಿವೆ. ಮೋಟಾರುಗಳು ಹೋಗಿಬರುವುದು ಧಾರಾಳವಾಗಿರುವಂತೆ ಕಾಲಮಾನಕ್ಕೆ ತಕ್ಕ ವಿಚಾರಗಳು ನಿರಾತಂಕವಾಗಿ ಚಡಚಣಕ್ಕೆ ಬರುತ್ತವೆ. ಪಟ್ಟಣದ ಚಳವಳಿ, ಉಡುಗೆ ತೊಡಿಗೆ, ರೀತಿ ನೀತಿ ಇವೆಲ್ಲಕ್ಕೂ ಇಲ್ಲಿ ಸುಸ್ವಾಗತವೇ. ಇಲ್ಲಿಯ ವ್ಯಾಪಾರಿಗಳಲ್ಲಿ ಕೆಲವರಿಗೆ ಮುಂಬಯಿ ನೆರೆಯೂರಿಗಿಂತ ಬಳಕೆಯದು. ಅಲ್ಲಿಯ ವಾತಾವರಣವೂ ಇಲ್ಲಿಯವರ ಉಸುರಿನಲ್ಲಿದೆ.

ಮೋಟಾರುಗಳು ಬರುವ ಮುಂಚೆ, ರೇಲ್ವೆಗೆ ೧೯ ಮೈಲು ದೂರವಿದ್ದ ಒಂದು ಮೂಲೆಯಲ್ಲಿಯ ಹಳ್ಳಿಯಾದರೂ ೨೫ ವರುಷಗಳ ಹಿಂದೆಯೇ ಪಟ್ಟಣದ ಬಳಕೆಯಿಂದ ನಾಟಕಮಂಡಳಿಯೊಂದು ಅಸ್ತಿತ್ವದಲ್ಲಿತ್ತು. ಅದರ ಹೊಣೆಗಾರರು, ಚಡಚಣವನ್ನು ದರ್ಪದಿಂದಾಳಿದ ಪ್ರಭುವಾದರೂ ಅವರು ಊರಿಗೆ 'ಕಾಕಾ.' ಅವರ ಪೂರ್ವ ಮಧ್ಯದಾಳಿಕೆಯಲ್ಲಿ, ಅವರ ಬಳಗದ ತರುಣರಿಗೆ/ಸಿಕ್ಕ ಹೊಸಕಾಲದ ಅಭಿರುಚಿ, ನವಜೀವನಾನುಕೂಲತೆಯ ಪರಿ

ಚಯ, ಅಧಿಕಾರಿಗಳ ಹಾಗೂ ಅದ್ಭುತ ವ್ಯಕ್ತಿಗಳ ಸಹಜ ಸಮಾಗಮ ಇವು ಗಳನ್ನು ಎಂದಿಗೂ ಮರೆಯುವಂತಿಲ್ಲ. ತಮ್ಮವರನ್ನು ಕಾಕಾ ಅವರು ತಂದೆ ಯಂತೆ ಬೆಳೆಸಿದರೆಂಬುದನ್ನು ಅರಿತರೆ ಸಾಕು. ಅವರಿಂದಲೇ ಚಡಚಣವು ನವನಾಗರಿಕತೆಯ ಆರಂಭದ ಪಾಠಗಳನ್ನು ಕಲಿಯಿತು. ಅದೇ ಮನೆಯ ಇನ್ನೊಂದು ಉಸಿರು ವೃತ್ತಪತ್ರಿಕೆ ಕಾದಂಬರಿಗಳ ಪರಿಚಯವನ್ನು ಊರಿಗೇ ಮಾಡಿಸಿ ಕೊಟ್ಟಿತು. 'ಕಾಕಾ' ಅವರ ಪ್ರೋತ್ಸಾಹನದಿಂದಲೇ ಕನ್ನಡ ಶಾಲೆಯ ಒಬ್ಬ ಮಾಸ್ತರರು ದಾಮಾಜಿ, ಪುಂಡಲೀಕ, ತುಕಾರಾಮ ಎಂಬ ನಾಟಕಗಳನ್ನು ಮರಾಠಿಯಿಂದ ಕನ್ನಡಕ್ಕೆ ತದ್ರೂಪವಾಗಿ ಪರಿವರ್ತಿಸಿದರು. ಇವೇ ನೆಲ-ಗಾಳಿಗಳಲ್ಲಿ ಸಲಿಗೆಯಿಂದ ಬೆಳೆದ ಒಬ್ಬ ಕುವರನು ಮುಂದೆ ಕೆಲವೇ ವರುಷಗಳಲ್ಲಿ ನಾಟಕ ಪ್ರಹಸನಗಳನ್ನು ಸ್ವಂತ ಬರೆದು, ಹಳ್ಳಿಗಳಲ್ಲಿ ಪ್ರಯೋಗಿಸಲು ಶಕ್ತನಾದನು. ಅವುಗಳಲ್ಲಿ ಕೆಲವು ಪ್ರಕಟವೂ ಆದವು. ಅಂತು ಚಡಚಣವು ಕನ್ನಡ ಸಾಹಿತ್ಯಸೇವಕರ ಕಿಂಕರನೊಬ್ಬನನ್ನು ಪಡೆಯಿತು.

ಚಡಚಣವು ಎಂದಿನಿಂದಲೂ ಚಟುವಟಿಕೆಯ ಊರು. ರಾಷ್ಟ್ರೀಯ ಮಹಾರವದೊಡನೆ ಶಕ್ತಿಮೀರಿ ದನಿಗೂಡಿಸುವ ಸಾಹಸಿಗಳೂ ಇದ್ದಾರೆ. ಪಡು ವಣದ ಕಡಲಿನಿಂದ ಬಂದಿಳಿದ ನವನೀತಿಯ ನವನೀತವನ್ನು ತಂದು ತನ್ನವರಿಗೆ ತಿನ್ನಿಸುವ ಮಹತ್ವಾಕಾಂಕ್ಷಿಗಳೂ ಇದ್ದಾರೆ. ವೀರಶೈವರ ಬಗ್ಗೆ ತುಂಬಾ ಅಭಿಮಾನಪಡುವ ವೀರ ಅಭಿಮಾನಿಗಳೂ ಇಲ್ಲದಿಲ್ಲ. ವ್ಯಾಯಾಮ ಮಂದಿರ ವಿಲ್ಲದಿದ್ದರೂ ವ್ಯಾಯಾಮಪ್ರಿಯರಿಗೆ ಕೊರತೆ ಇಲ್ಲ. ಇವೆಲ್ಲ ಗಣಾಂಕುರಗಳು ಮೊಳೆತದ್ದು ೧೯೩೧-೩೨ ರಲ್ಲಿ, ಒಬ್ಬ ಕನ್ನಡ ಮಾಸ್ತರರ ಸತತ ಪರಿಶ್ರಮ ದಿಂದ. ಸಾರ್ವಜನಿಕ ವಾಚನಾಲಯ, ಮಾತುಗಾರಿಕೆಯ ಕೂಟ, ವ್ಯಾಯಾಮ ಮಂದಿರ ಮುಂತಾದ ಚಟುವಟಿಕೆಗಳು ಆಗಲೆ ಆರಂಭವಾದವು. ಆ ಗರಡಿ ಯಲ್ಲಿ ಜನರು ನುರಿತರು. ಕೆಲವು ಹುಡುಗರೂ ತರಬೇತುಹೊಂದಿದರು. ೧೯೩೩ ರಲ್ಲಿ ಕೆಲವು ಹುಡುಗರ ಸಾಹಸವು ಒಂದಿಷ್ಟು ದುಡುಕಿ, ಸ್ವತಃ ಬರೆದ ಒಂದು ಚಿಕ್ಕನಾಟಕವನ್ನಾಡಿ ಊರ ಜನರ ಚಿತ್ತವನ್ನೆಲ್ಲ ಚಂಚಲಿಸಿ ತಲೆತಿರುಗಿಸಿತು. ಅದೇ ಗಾಳಿಯೇ "ವಾಗ್ವಿಲಾಸ ಭವನ"ವನ್ನು ಕಟ್ಟಿತು; ಅದೇ ಸೆಲೆಯು ತರುಣರನ್ನು ಸರ್ಕಸಿನಲ್ಲಿ ಜಿಗಿದಾಡಿಸಿತು, ಅದೇ ಸ್ಫೂರ್ತಿಯು "ಮುದ್ದು" ಎಂಬ ಕೈಬರಹದ ಸಾಪ್ತಾಹಿಕ ಪತ್ರಿಕೆಯನ್ನು ಹೊರಡಿಸಿತು.

ಊರು ರಸಿಕರ ತಾಯಿ, ನದಿಯಷ್ಟು ದೊಡ್ಡ ಹಳ್ಳ. ಅಗಲವಾಗಿ ಊರ ಎರಡು ಮಗ್ಗಲು ಹರಿದು, ತನ್ನ ತಂಗಿಯೊಡನೆ ಒಂದುಗೂಡಿ ಮುಂದು ವರಿದಿದೆ. ಆ ತಿಳಿಯಾದ ನೀರು, ಆ ಸ್ವಚ್ಛವಾದ ಉಸುಕಿನ ಬಯಲು-ಹಾಸಿಗೆ, ಆ ಸಂಗಮೇಶ್ವರನ ದೇವಾಲಯದ ಸ್ಥಾನ ಇವುಗಳ ಸೊಬಗು ಮುಂಜಾನೆ ನೋಡಬೇಕು. ಅಂಗಸಾಧನೆಗೂ, ಅಂಗಭಾವನೆಗೂ ತೊಡಗಿದ ಗುಂಪು ಗುಂಪಿನ ತರುಣರಿಂದ ವಿಶೇಷ ಶೋಭೆ ಬರುತ್ತದೆ. ಊರ ಮುಂದಿನ ಭವ್ಯ ಶಾಲೆ, ಶಾಲೆಯ ಮುಂದಿನ ವಿಸ್ತಾರವಾದ ಬಯಲು, ಆ ಬಯಲನ್ನೆಲ್ಲ ತುಂಬಿ ನೆರೆಯುವ ಸಂತೆ, ಹಳ್ಳದಲ್ಲೆಲ್ಲಾ ದನಗಳ ಸಂತೆ, ಇವನೆಲ್ಲ ನೋಡಿ ಚಕಿತ ರಾಗದವರಿಲ್ಲ. ಗ್ರಾಮ ಪಂಚಾಯತಿಯವರಿಂದ ಊರ ಸೌಂದರ್ಯವೂ ಅಚ್ಚುಕಟ್ಟುತನವೂ ಇಮ್ಮಡಿಸಿವೆ.

ಇಡೀವಾರ ನಿರುದ್ಯೋಗಿಯಾದ ಪೋಲಿಯು ಕೂಡ ಸಂತೆಯದಿನ ವಾರದ ಚಿಂತೆ ತಪ್ಪಿಸಿಕೊಳ್ಳುವನು. ಇಲ್ಲಿ ಹುಡುಗರೂ ಗಳಿಕೆಗಾರರು. ಗಳಿಸುವ ದಾರಿಯ ಸುಲಭತೆ, ಉದ್ಯೋಗದ ಸ್ವತಂತ್ರತೆ, ಖರ್ಚು ಮಾಡುವ ಔದಾರ್ಯ ಇವು ಆರಂಭದಿಂದಲೇ ಬಾಲಕರ ಮೈಯುಂಡು ಹೋಗಲು ಶಕ್ಯವಾಗಿದೆ. ಆದರೆ ಶಿಕ್ಷಣ ಮಾತ್ರ ತುಸು. ಮೊದಲು ಬಯಲಾಟದ ಮಾತು ಕಲಿಯುವ ಪೂರ್ತಿ ಬಂದರೆ ಸಾಕಾಗುತ್ತಿತ್ತು; ಈಗ ವಾರಪತ್ರಿಕೆ ಓದುವಷ್ಟಾದರೆ ಸಾಕು. ಸುಶಿಕ್ಷಿತರು ಇನ್ನೂ ಹುಟ್ಟಿಲ್ಲವೆನ್ನಬೇಕು.

ಹೊಸಬರು ಊರಿಗೆ ಪ್ರವೇಶಿಸಿದ ಕೂಡಲೇ ಯಾವುದೋ ಫಲವತ್ತಾದ ಪ್ರಾಂತದ ಒಂದು ಹಳ್ಳಿಯಲ್ಲಿ ಬಂದೆವೆಂದು ಅನಿಸುವಂತಿದೆ. ಬಣ್ಣಗಾರ, ನೇಕಾರ, ವ್ಯಾಪಾರಿ ಮೊದಲಾದ ಉದ್ದಿಮೇದಾರರ ಊರು. ಉದ್ಯೋಗಗಳೆಲ್ಲ ನಮ್ಮವರ ಕೈಯಲ್ಲಿದ್ದಾಗ ಬಹಳ ಸುಖವಾಗಿದ್ದ ಊರು. ಆಟ-ಪಾಟ, ಹಾಡು-ಬಾರಿಸುವಿಕೆ, ಸೋಗು-ಕುಣಿತ ಮೊದಲಾದ ಮನೋರಂಜನೆಯ ಕಾರ್ಯಕ್ರಮಗಳು ಬೇಕಾದಷ್ಟು ಜರುಗುತ್ತಿದ್ದವು. ಈಗ ಉದ್ಯೋಗ ಕಳೆದು, ಕೂಲಿ ಸಿಗದೆ ಕೂಳಗೇಡಿಗಳಾಗಿ ತಿರುಗುತ್ತಿರುವ ಉದ್ದಿಮೇದಾರರ ಭಯಾನಕ ದೃಶ್ಯವು ಯಾವ ಪರಿಚಿತನ ಎದೆಯನ್ನು ಕೊರೆಯದಿರದು ? ಸಂತೆಯೊಂದು ಈ ಊರ ಕಾಮಧೇನುವಾಗಿದ್ದರಿಂದ ಜನರು ಇನ್ನೂ ಬದುಕಿದ್ದಾರೆನ್ನಬೇಕು.

ಊರ ಮುಂದಾಳುಗಳಲ್ಲಿ ಚಟುವಟಿಕೆಯಿದೆ; ಸಾಹಸವಿದೆ; ಆದರೆ ಅವರಿಗೆ ನಾಡಿನ ನಾಡಿಪರೀಕ್ಷೆ ಆಗಬೇಕು. ಗ್ರಾಮಪಂಚಾಯತಿಯು ಊರ ಹಿತವನ್ನು ಸಾಧಿಸುವ ದಾರಿಯಲ್ಲಿದೆ. ಅದಿನ್ನೂ ಮುಂದುವರಿಯಬೇಕು: ಊರ ಕಾರಭಾರಿಗಳೆಲ್ಲ ಬಹುಶಃ ವ್ಯಾಪಾರಿಗಳು. ನಮ್ಮ ವ್ಯಾಪಾರವೆಂದರೆ ಪರಸ್ಪರರ ತುತ್ತನ್ನು ಕಸುಗೊಳ್ಳುವ ಕಚ್ಚಾಟ. ತಾಮ್ರದ ದುಡ್ಡು ತಾಯಿ ಮಕ್ಕಳನ್ನೂ ಕೆಡಿಸುವಾಗ ವ್ಯಾಪಾರಿಗಳ ಮನಸ್ಸು ಕೆಡಿಸದಿರುವುದೇ? ಎರಡು ಮನಗಳಿಂದ ಒಂದು ಕೆಲಸವಾಗಲಾರದು. ಅದು ಅಸಮಾಧಾನಕರ. ಅಂತೆಯೇ ವಾಚನಾಲಯ, ಧಾರ್ಮಿಕೋತ್ಸವ, ಶೈಕ್ಷಣಿಕಪ್ರಗತಿ ಮುಂತಾದ ರಾಷ್ಟ್ರದ ಯಾವ ಕೆಲಸಗಳೂ ಮುಂದುವರಿದಿಲ್ಲ. ಊರವರನ್ನು ಚೆನ್ನಾಗಿ ಒಂದು-ಗೂಡಿಸಲು, ಅವರಿಗೆ ಈಗಿದ್ದಷ್ಟೇ ಭಾರತೀಯತೆಯ ಕಲ್ಪನೆ ಸಮರ್ಥವಾಗದು. ದುಡಿಯುವ ಜನರಿದ್ದಾರೆ; ಮಾಡುವ ಮನಸ್ಸಿದೆ; ಕೊಡುವ ಪುಟ್ಟ ಕೈ ಇವೆ. ಆದರೆ ಮಾಡಿಸುವ ಮುಂದಾಳು ಬೇಕು. ಹತ್ತು ತಲೆಗಳನ್ನು ಒಂದುಗೂಡಿಸಿ ದಶಕಂಠನನ್ನಾಗಿ ಮಾಡುವ ಶಕ್ತಿಯುಳ್ಳ ಮುಂದಾಳು ಬೇಕು. ಚಡಚಣದ ಗಾಳಿಯಿಂದ ಹಲಸಂಗಿಯ ಧೂಳು ನೆಲ ಬಿಟ್ಟೇಳಬೇಕು; ಹಲಸಂಗಿಯ ಧೂಳಿನಿಂದ ಚಡಚಣದ ಗಾಳಿ ಅಂಕೆಯಲ್ಲಿ ಬರಬೇಕೆಂದು ಹಾರೈಸುವುದು ನನ್ನ ಕರ್ತವ್ಯ. ಏಕೆಂದರೆ—ಇದು ಜನ್ಮದಾತೆ; ಅದು ಜೀವದಾತೆ.

—ಸಿಂಪಿ ಲಿಂಗಣ್ಣ

---

# ಕಾರವಾರ

ಕಾರವಾರದ ಪ್ರಕೃತಿ ಸೌಂದರ್ಯವನ್ನು ಕಂಡು ಎದೆ ತುಂಬಿ ಮೂಕ ವಿಸ್ಮಿತನಾಗದ ರಸಿಕನಿಲ್ಲ. ಹಾಡಿ ತಣಿಯದ ಕವಿಯಿಲ್ಲ. ಪಂಡಿತರಿಂದ ಪಾಮರರೂ ದೇವನ ಸೃಷ್ಟಿರಚನೆಯ ಕೈವಾಡಕ್ಕೆ ಬೆರಗಾಗಿ ಬೆರಳನ್ನು ಮೂಗಿನ ತುದಿಗೇರಿಸಿದ್ದಾರೆ. ತನ್ನ ಮೂಗೇ ಮೇಲೆಂದು ಮೆರೆಯು ತ್ತಿದ್ದ ಮಾನವನೂ, ಮೇಲಿನ ನೀಲಾಕಾಶ, ಹಿಂಬದಿಯ ಮುಗಿಲ ಮುಟ್ಟ

ಲೆದ್ದ ಪರ್ವತ ಸಾಲು, ಅಂತಪಾರವಿಲ್ಲದ ತೆರೆಗಳ ಆಗರವಾದ ಸಾಗರವನ್ನು ಕಂಡು ತಾನೊಬ್ಬ ಕ್ಷುದ್ರನೆಂದು ಬುದ್ಧಿ ಕಲಿತಿರಲು ಸಾಕು.

ಹಿನ್ನೆಲೆಯ ವನಶ್ರೀಯ ಮಧ್ಯದಲ್ಲಿ ಕಾರವಾರವೆಂಬದು ವಪ್ರಕ್ರೀಡೆಯಲ್ಲಿ ತೊಡಗಿರುವ ಆನೆಯಂತೆ ಭಾಸವಾಗುತ್ತಿದೆ. ಕಿರಿದಾದ ಬಿಳಿ ಮಳಲಿನ ಉದ್ದನ್ನ ದಂಡೆ, ಕಣ್ಣು ಕಾಣುವವರೆಗೂ ತೆರೆ ಮೇಲೆ ತೆರೆ ಯೆದ್ದು ಮೊರೆಯುತಿಹ ತೆರೆಪಂಕ್ತಿ, ತೆರೆಗಳ ತಾಕಲಾಟ ಅದನ್ನು ಕಂಡು ನೀರಿನ ಅನುದಿನದ ನಗೆಯಿಂದಾದ ನೊರೆ.ಪೆರ್ಮೊರೆಯು ಬಂಡೆಗಲ್ಲಿಗೆ ಅಪ್ಪಳಿಸಿ ಸಿಡಿವ ತುಷಾರಗಳಲ್ಲಿ ಸೂರ್ಯನ ಸಂಧ್ಯಾರುಣ ಕಿರಣಗಳು ಪ್ರತಿಫಲಿಸಿದಾಗ ಕಾಣುವ ಕಾಮನಬಿಲ್ಲು. ಯುದ್ಧಕ್ಕಾಗಿ ಹಡಗುಗಳಲ್ಲಿ ತುಂಬಿಹೋಗಲು ಸಶಸ್ತ್ರರಾಗಿ ನಿಂತವರಂತೆ ಕಾಳೀ ನದಿಯ ದಂಡೆಗುಂಟ ಸಮುದ್ರದೊಳಕ್ಕೆ ಚಾಚಿ ನಿಂತ ಗಾಳಿಮರಗಳ ಸಾಲು—ಅದರ ಮುಂದೆಯೇ ಸಣ್ಣದೊಂದು ಕೂರ್ವೆ. ಆದರ ಹತ್ತಿರವೇ ಗಾಳಿಯ ಮರ್ಮರ, ಸಾಗರದ ಭೋರ್ಗರೆವ ಸಪ್ಪಳದ ಜೋಗುಳದಲ್ಲಿ ಬೆಳೆದ ಅಂಬಿಗರು ; ಅವರು ವಾಸಿಸುವದರಿಂದಲೇ ಗುಡಿಸಲೆಂದು ಕರೆಯಿಸಿಕೊಳ್ಳುವ ಗೂಡುಗಳು. ಎಲ್ಲಿಯೂ ನಿಲ್ಲಲು ಆಶ್ರಯವಿಲ್ಲದೆ ನಿಸ್ಸಹಾಯವಾಗಿ ಮುಂದಕ್ಕೆ ಹೋಗುತ್ತಿರುವ ಹಡಗಗಳನ್ನು ಕಂಡು ಕನಿಕರಪಟ್ಟು ತನ್ನ ಮಡಲಲ್ಲಿ ಸ್ಥಳ ಕೊಟ್ಟಿರುವ ಬೈತಖೋಲದಲ್ಲಿಯ ಗುಡ್ಡ ಇವೆಲ್ಲ ಬಣ್ಣನೆಗೆ ನಿಲುಕದ್ದು. ಭಾಷೆಯನ್ನು ಅಳಿದದ್ದು. ಅದಕ್ಕಾಗಿಯೇ ಕನ್ನಡ ತಾಯನ್ನು ಸಾಕ್ಷಾತ್ಕರಿಸಿ ಒಸಗೆಯನ್ನು ತಂದ ಶ್ರೀಯವರು ತಮ್ಮ ಪ್ರವಾಸದ ಶ್ರೀಗಣೇಶವನ್ನು ಚೆಲುವ ಕಣಿ ಕಾರವಾರದಿಂದಲೇ ಮಾಡಿದರು. ಆಗರಗೋಣದ ಜಾನಪದ ಕವಿಯೊಬ್ಬನು ಕನ್ನಡ ನಾಡಿನ ಸೌಂದರ್ಯವನ್ನು ಬಣ್ಣಿಸುತ್ತ 'ಸಾಗರ ಸಂಭ್ರಮದಾಗರ ನೋಡಲು ಪಡುವಣದಲ್ಲಿ ಕಾರ್ವಾರವಿದೆ' ಎಂದು ಜನತೆಯನ್ನು ಕರೆದರು.

ಸಮುದ್ರದಾಚೆಯಿಂದ ಎಂಬುದರಲ್ಲಿ 'ಇಂಡಿಯಾ ಆಫೀಸುಗಳಿದ್ದ ಬೀದಿ ಸಾಮ್ರಾಜ್ಯದ ಬೀದಿ' ಎಂದು ಕರೆದ ಹಾಗೆ ಸಮುದ್ರಕ್ಕೆ ಸಮಾಂತರವಾಗಿ ರಸ್ತೆಯ ಇನ್ನೊಂದು ಮಗ್ಗುಲಿಗಿದ್ದ ಕಟ್ಟಡಗಳ ಸಾಲು ಉತ್ತರ ಕನ್ನಡ ಗಡಿಯಾರದ ಮೇನ್ ಸ್ಪ್ರಿಂಗ ಎನ್ನಬಹುದಾಗಿದೆ. ತಾನೇನೂ ಕಲಿಯದಿದರೂ, ಕಲಿತವರಿಗೆ ಕಲಿಸಿದವರೆಂಬ ಹೆಮ್ಮೆಯನ್ನಾದರೂ ಹೊಂದ್ದ

ಬಹುದಾದ ಶಿಕ್ಷಕರು 'ಸಾವಕಾಶವಾಗಿ ಸಾಹೇಬರಿದ್ದಾರೆಯೇ' ಎಂದು ಕೇಳಿದರೆ ಎದೆ ಸೆಟೆಸಿ ಉತ್ತರ ಕೊಡುವ ಸ್ಕೂಲ ಬೋರ್ಡ ಆಫೀಸಿನ ಪ್ಯೂನ, ಮಗ್ಗುಲಲ್ಲೇ ಜಾತಿ ಬಿಟ್ಟಾಗಲೇ ಭಾಷೆಯನ್ನೂ ಬಿಟ್ಟೆವೆಂದು ಸಾರುವ Convent, ಪಕ್ಕದಲ್ಲಿ ಮಿತ್ರಸಮಾಜ, ಅದರಾಚೆಯೇ ಧರ್ಮದರ್ಶಿಯ ಆದರ್ಶವಾದ ಟ್ರೆಝರಿ ಕಾಯುತ್ತ ನಿಂತಿರುವ ಪೋಲೀಸ, ಕಲೆಕ್ಟರರ ಆಫೀಸು, ಇತ್ಯಾದಿ.

ಊರಲ್ಲಿ ಎರಡು ಹೈಸ್ಕೂಲುಗಳಿವೆ. ಒಂದಂತೂ ಬೆಳೆಯುತ್ತಿರುವ ಕಾರವಾರದ ಪ್ರತೀಕವಾಗಿ ನಿಂತ ಹಿಂದೂ ಹೈಸ್ಕೂಲು. ಮೊದಲು ಒಂದು ಮನೆಯಿಂದ ಆರಂಭವಾಗಿ ಈಗ ಮೂರು ನಾಲ್ಕು ಮನೆಗಳನ್ನು ಒಳಗೊಂಡಿದೆ. ಸರಕಾರೀ ಹೈಸ್ಕೂಲು ಇನ್ನೊಂದು. ಅದರ ಮುಂದುಗಡೆಯಲ್ಲೇ ಚರ್ಚು—ಕಲ್ಲಿನ ಆವಾರದಲ್ಲಿ ಎತ್ತರವಾಗಿ ನಿಂತ ಮೇರಿಯ ಪ್ರತಿಮೆ. ಹೈಸ್ಕೂಲಿನ ಹತ್ತಿರವೇ ಹುಚ್ಚರ ಆಸ್ಪತ್ರೆ, ಹೆರಿಗೆಯ ಆಸ್ಪತ್ರೆ. ಇನ್ನೊಂದು ದನಗಳ ಆಸ್ಪತ್ರೆಯೂ ಆಗಲಿದೆಯಂತೆ. ಕಾರವಾರದ ಮರುಭೂಮಿಯಲ್ಲಿ ಕನ್ನಡದ ಒಯೆಸಿಸ್ಸಾಗಿ (Oasis) ನಿಂತಿರುವ ಉಡುಪಿ ಖಾನಾವಳಿ. ತನ್ನದೆ ಮೇಲು ತನ್ನದೆ ಮೇಲು ಎಂದು ಸ್ಥಾಪನೆಯಾಗಿರುವ ಗೆಸ್ಟ್ ಹೌಸ್, ಒಂದು ಸಿನೆಮಾ ಗೃಹ. ಇಂದು ಊರು ಬೆಳೆದು ಬಾಡದವರೆಗೂ ಅತ್ತ ಕಾಳೀ ನದಿಯವರೆಗೂ ಚಾಚಿದೆ. ಊರಿಂದ ದೂರದಲ್ಲಿ ಜೈಲೂ ಇದೆ.

ಕಾರವಾರದ ಹಿಂದಿನ ಇತಿಹಾಸ ಅಷ್ಟೇನೂ ಪ್ರಸಿದ್ಧವಾದುದಲ್ಲ; ಹದಿನೇಳನೇ ಶತಮಾನದ ಆರಂಭದಲ್ಲಿ ವಿಜಾಪುರದ ವಶದಲ್ಲಿದ್ದ ಬಂದರವಾಗಿತ್ತು. ಜೊನ್ ಫ್ರಾನ್ಸಿಸ್ಕೋ ಎಂಬ ಪೋರ್ಚುಗೀಜ ಸರದಾರನು ತನ್ನ ಹಡಗವೊಂದನ್ನು ಕೊಟ್ಟು ಫೆಕ್ಟರಿಗೆ ಸ್ಥಳ ಪಡೆದನಂತೆ. ೧೬೩೮ರಲ್ಲಿ ಮೆಣಸಿನ ವ್ಯಾಪಾರವನ್ನು ಕಂಡು (ಕಚ್ಚಿದುದರಿಂದಲ್ಲ) ಬಾಯಲ್ಲಿ ನೀರೂರಿದ ಇಂಗ್ಲಿಷರು ತಮ್ಮ ಫೆಕ್ಟರಿಯೊಂದನ್ನೂ ಅಲ್ಲಿಯೇ ಮಾಡಿಕೊಂಡರಂತೆ. ೧೬೬೫ರಲ್ಲಿ ಶಿವಾಜಿಯು ಇವರಿಂದ ೧೧೨ ಪೌಂಡು ಕರವನ್ನು ವಸೂಲು ಮಾಡಿದನಂತೆ. ಆ ಕಂಪನಿಯ ಏಳಿಳಿತವೇ ಕಾರವಾರದ ವ್ಯಾಪಾರದ ಇತಿಹಾಸ. ೧೮೬೨ರಲ್ಲಿ ಮುಂಬೈ ಇಲಾಖೆಗೆ ಸೇರಿದಂದಿನಿಂದ ಮುಖ್ಯ

ಪಟ್ಟಣವಾಗಿ ನೌಕರರ ವಾಸಸ್ಥಳವಾಯಿತು. ಅವರ ಮಕ್ಕಳ ಶಿಕ್ಷಣಕ್ಕಾಗಿ ಹೈಸ್ಕೂಲೊಂದು ಸ್ಥಾಪನೆಯಾಯಿತು.

ಯಾರ ಪುಣ್ಯದ ಫಲವಾಗಿಯೋ ಸರಕಾರಿ ಭಾಷೆ ಕನ್ನಡವಾಗಿ ಉಳಿದಿದೆ. ಆ ಹಕ್ಕಿನ ಸಲುವಾಗಿಯೋ ಏನೋ ಒಮ್ಮೆ ಕರ್ನಾಟಕ ಸಾಹಿತ್ಯ ಸಮ್ಮೇಲನ, ಏಕೀಕರಣ ಪರಿಷತ್ತು ಕೂಡಿತು. ಸಾಹಿತ್ಯ ಪರಿಷತ್ತು ಕೂಡಿದ ದಿನ ರಾತ್ರಿಯೇ ಕರ್ನಾಟಕ ಸಂಘ ಸ್ಥಾಪನೆಯೂ ಆಯಿತು. ರಾತ್ರಿಯಲ್ಲಿ ಹುಟ್ಟಿದುದಾದುದರಿಂದ ತನ್ನ ತಾಯಿ ತಂದೆಗಳ ಹೊರತಾಗಿ ಇನ್ನಾರಿಗೂ ಗೊತ್ತಾಗದೆ ಹಗಲಿಗೆ ಹೊರಬೀಳದಂತಹ ಸ್ಥಿತಿಯಲ್ಲಿದೆಯೋ ಯಾರು ಬಲ್ಲರು! ಅದರ ಉದ್ಧಾರಕ್ಕಾಗಿ ಒಮ್ಮೆ ಮೀಟಿಂಗು ಕೂಡಿತು. ಕರೆಯಿಸಿದವರು ಬಂದರು, ಆದರೆ ಕರೆದವರೇ ಬರಲಿಲ್ಲ.

ಸುತ್ತುಮುತ್ತಲಿನ ಜನ ತಾವು ಆಡುವ ಭಾಷೆ ಯಾವುದೆಂದು ಅರಿಯದಿದ್ದರೂ ಕನ್ನಡವನ್ನೇ ಆಡುತ್ತಿದ್ದಾರೆ. ಅಷ್ಟೇ ಅಲ್ಲ; ಅವರಲ್ಲಿಯ ಹೆಂಗುಸರು ದೊಡ್ಡವರ ಮನೆಯಲ್ಲಿ ಕೂಲಿಗಿರುವುದರಿಂದ ಮನೆಯ ಯಜಮಾನಗಿತ್ತಿಯರಿಗೂ ಒತ್ತಾಯದ ಕನ್ನಡ ದೀಕ್ಷೆ ಕೊಟ್ಟಿದ್ದಾರೆ.

ಇಲ್ಲಿಯ ಕನ್ನಡದ ಮುನ್ನಡೆಯಾಗದಿದ್ದುದು ಪರಭಾಷಾಭಿಮಾನಿಗಳು ಅಡ್ಡಗಾಲು ಹಾಕಿದುದರಿಂದಲ್ಲ; ಕನ್ನಡಿಗರ ನಿಷ್ಕ್ರಿಯತೆಯಿಂದ. ಎಲ್ಲ ಆಫೀಸರರೂ ಮೇಲಧಿಕಾರಿಗಳೂ ಅಂಕೆಯನ್ನು ಕನ್ನಡದಲ್ಲಿ ಹೇಳದಿದ್ದರೂ ಹದಿನಾರಾಣೆ ಕನ್ನಡಿಗರು. ಗವ್ಹರ್ನಮೆಂಟ ಹೈಸ್ಕೂಲಿನ ಲೈಬ್ರರಿಯಲ್ಲಿ ಮರಾಠಿ ಪುಸ್ತಕದ ಪ್ರಾಬಲ್ಯವಾದುದು ಅಚ್ಚ ಕನ್ನಡಿಗರ ಆಧಿಪತ್ಯದಲ್ಲಿ. ಆ ಕಾಲಾವಧಿಯಲ್ಲಿ ಮರಾಠಿ ಮನೆಮಾತಿನ ಮುಖ್ಯಾಧ್ಯಾಪಕರಾದುದು ಒಂದೇ ಒಂದು ಸಲ. ಅಷ್ಟೇ ಅಲ್ಲ; ಕೊಂಕಣಿ ಮಾತನಾಡುವವರೇ ಹೆಣ್ಣು ಹುಡುಗಿಯರಿಗಾಗಿ ಕನ್ನಡಸಾಲೆಯೊಂದನ್ನು ತೆರೆಯಲು ಪ್ರಯತ್ನಪಟ್ಟರು. ಅದು ಕೆಚ್ಚೆದೆಯ ಕನ್ನಡಿಗರು ಇನ್ಸಪೆಕ್ಟರರಿರುವಾಗಲೇ ಸಾಧ್ಯವಾಗಲಿಲ್ಲವೆನ್ನುವುದು ಸೋಜಿಗದ ಸಂಗತಿ.

ಸಾಕ್ಷರತಾಪ್ರಸಾರದ ಚಳವಳಿ ಕಾಂಗ್ರೆಸ್ಸು ಮಂತ್ರಿಮಂಡಲದ ಕಾಲದಲ್ಲಿ ಕಾರವಾರದಲ್ಲಿಯೂ ಆರಂಭವಾಯಿತು. ಹಂಸಾ ಮೇಥಾರವರು ಪ್ರಾರಂಭೋತ್ಸವಕ್ಕೆ ದಯಮಾಡಿಸಿದ್ದರು. ಅವರು ಇಂಗ್ಲೀಷಿನಲ್ಲಿಯೋ

ಹಿಂದಿಯಲ್ಲಿಯೋ ವ್ಯಾಖ್ಯಾನ ಮಾಡಿದರು. ಅದರ ಅನುವಾದ ಮರಾಠಿಯಲ್ಲಾಯಿತು. ಮರಾಠಿ ಇಲ್ಲಿಯ ಜನವಾಣಿಯಲ್ಲವಾದುದರಿಂದ ಕೊಂಕಣಿಯಿಂದ ಇನ್ನೊಬ್ಬರು ತಿಳಿಸಿಹೇಳಿದರು. ಇದ್ದುದರಲ್ಲಿಯೇ ಪುಕ್ಕಟೆ ಔದಾರ್ಯ ತೋರಿಸುವ ಸಂದರ್ಭವನ್ನೇಕೆ ಬಿಟ್ಟುಗೊಡಬೇಕೆಂದು ಕರುಣಾಳುವಾದ ಕನ್ನಡಿಗ ಸುಮ್ಮನಾದ. ಹಂಸಾ ಮೇಥಾರವರ ವ್ಯಾಖ್ಯಾನ ಜನತೆಗೆ ಅರ್ಥವಾಯಿತು. ಆದರೆ ಈ ಭಾಷಾಗೊಂದಲವುಮಾತ್ರ ಜನತೆಗೆ ತಿಳಿಯಲಿಲ್ಲ.

ಆ ಮೇಲೆ ಸಾಕ್ಷರತಾ ಪ್ರಸಾರಕ್ಕಾಗಿ ಕೊಂಕಣಿ, ಮರಾಠಿಯಲ್ಲಿ ಪದ್ಯ ಆರಂಭವಾಯಿತು. ದಾಕ್ಷಿಣಾತ್ಯರು ಆರಂಭಶೂರರೆಂದು ಹಂಗಿಸುವ ಮಾತನ್ನು ಸುಳ್ಳು ಮಾಡಬೇಕೆಂದು ಕಾರವಾರದ ಕನ್ನಡಿಗ ಯೋಚಿಸಿದ್ದರಿಂದ ಯಾವ ಪದ್ಯವನ್ನೂ ಆರಂಭಿಸಲೇ ಇಲ್ಲ.

ಒಂದು ವರ್ಷದ ಹಿಂದೆ ಮುಂಬೈ ಇಲಾಖೆಯ ಪ್ರೌಢ ಶಿಕ್ಷಣ ಮಂಡಲದ ವರ್ಷಾಂತ್ಯದ ಮಿಾಟಿಂಗು ನಡೆಯಿತು. ಭಾಗವತ, ಮಿಸ್ ರುಸ್ತುಂಜಿ ಮೊದಲಾದ ಪ್ರೌಢ ಶಿಕ್ಷಣ ಪ್ರಯೋಗವನ್ನು ಯಶಸ್ವಿಯಾಗಿಸಿದ ಜನ ಬಂದಿದ್ದರು. ಭಾಷೆಯ ವಿಷಯದಲ್ಲಿ ದುಹೇರಿಕಾರಭಾರ ಕಾರವಾರದ್ದು. ಗಂಡುಮಕ್ಕಳೆಲ್ಲ ಕಲಿವುದು ಕನ್ನಡ. ಹೆಣ್ಣುಮಕ್ಕಳೆಲ್ಲ ಕಲಿವುದು ಮರಾಠಿ. ಈಗೀಗ ಅಪವಾದವಾಗಿ ಹೆಣ್ಣು ಹುಡುಗಿಯರಿಗೆ ಕಲಿಸುವ ಒಂದು ಕೊಟ್ಟಿಗೆ ಇದೆ. (ಹುಡುಗಿಯರ ಸಾಲೆಯ ಕಟ್ಟಡದ ಮುಂದೆ ಇದು ಕೊಟ್ಟಿಗೆಯೇ) ಶ್ರೀ. ಭಾಗವತರು ಎಷ್ಟು ಪ್ರೌಢರಿಗೆ ಶಿಕ್ಷಣ ಕೊಟ್ಟಿರಿ ಎಂದು ಕೇಳಿದರು. ನಿಯಮಿತ ಕಾಲದಲ್ಲಿ ಆರಂಭಿಸಿರುವುದಾಗಿ ಮರಾಠಿ ಶಿಕ್ಷಕಿಯರು ಹೇಳಿದರು. ಆದರೆ ಕನ್ನಡ ಶಿಕ್ಷಕಿಯರು ಕೊಟ್ಟ ಉತ್ತರ ಸತ್ಯ ಹರಿಶ್ಚಂದ್ರನನ್ನೂ ನಾಚಿಸುವಂತಿತ್ತು. ೫-೬ ದಿನದಿಂದ ಮಾತ್ರ ಆರಂಭಿಸಿದ್ದೇವೆ, ಒಬ್ಬಿಬ್ಬರಿಗೆ ಎಂದರು.

ಇಲ್ಲಿಯ ಜನರಲ್ ಲೈಬ್ರರಿ ಜಿಲ್ಲೆಯಲ್ಲೇ ಹೆಸರಾದ ಲೈಬ್ರರಿ. ಇಲ್ಲಿ ಜನರಲ್ಲರಿಗೇ ಸ್ಥಾನ; ಜನರಿಗಲ್ಲ. ಆದುದರಿಂದ ರಾಜಭಾಷೆಗೆ ಮುಖ್ಯ ಸ್ಥಾನ; ಕೆಲಕಾಲದ ಹಿಂದೆ ರಾಜಭಾಷೆಯಾಗಿದ್ದ ಮರಾಠಿಗೂ ತುಸುಮಟ್ಟಿಗಿತ್ತು. ಆದಿದ್ರಾವಿಡವಾದ ಕನ್ನಡಕ್ಕೆ ಆ ರಾಜಸಭೆಯಲ್ಲಿ ಸ್ಥಾನವೇ ಇಲ್ಲದಿದ್ದರೆ ಆಶ್ಚರ್ಯವೇನು? ಈಗಿತ್ತಲಾಗಿ ಬೇರೆ ಪತ್ರಿಕೆಗಳಿಗಿಂತ

ಬಿಸಿ ಸುದ್ದಿ ಸಂಯುಕ್ತ ಕರ್ನಾಟಕದಲ್ಲಿ ಮೊದಲು ಸಿಗುತ್ತಿದೆಯಾದುದರಿಂದ ಅದಕ್ಕೊಂದು ಇಣಕಿ ಹಾಕಲು ಇಂಬು ದೊರೆತಿದೆ.

ಒಮ್ಮೆ ಗೆಳೆಯರ ಗುಂಪಿನಲ್ಲಿ ಯುದ್ಧದಿಂದಾದ ಲಾಭದ ಬಗ್ಗೆ ಮಾತಿದ್ದಿತು. ಒಬ್ಬನೆಂದ "ಇನ್ನೂ ಹತ್ತು ವರ್ಷ ಯುದ್ಧ ನಡಿಯಲಪ್ಪ! ನಮ್ಮ ಪೇದೆಯೂ ಕಲೆಕ್ಟರನಾಗಬಹುದು." ಮಗದೊಬ್ಬ ಕನ್ನಡಾಭಿಮಾನಿ "ಯುದ್ಧದಿಂದ ಬೇಕಾದ ಹಾನಿ ಆಗಲೊಲ್ಲದೇಕೆ? ಕಾರವಾರ ಗವರ್ನ್ಮೆಂಟ ಹೈಸ್ಕೂಲಿನಲ್ಲಿ ಮರಾಠಿ ಕಲಿಸಲು ಮಹಾರಾಷ್ಟ್ರದ ಶಿಕ್ಷಕರು ದೊರೆಯದ್ದರಿಂದ ಆ ವಿಭಾಗ ತೆಗೆದುಹಾಕಿದ್ದಾರೆ" ಎಂದ. ಕಾಕತಾಲೀಯ ನ್ಯಾಯವೇ ಕನ್ನಡದ ಮುನ್ನಡೆಗೆ ಕಾರಣವಾಗಬೇಕೆಂಬ ಬಯಕೆ ಈ ಗೆಳೆಯನಂತೆ ಇತರರಿಗೂ ಇದ್ದುದಾದರೆ ಕನ್ನಡಕ್ಕೆ ಕೇಡು ತಪ್ಪಿದುದಲ್ಲ.

ಕೊಂಕಣಿಗರಿಂದ ಕನ್ನಡಕ್ಕೆ ಕೇಡಾಗಿದೆಯೆಂಬುದು ಹುರುಳಿಲ್ಲದ ವಾದ. ಯಾವುದಕ್ಕೂ ಸಹಾಯಮಾಡದವರ ಬತ್ತಳಿಕೆಗೆ ಇದೊಂದು ಅಸ್ತ್ರವಾಗಿದೆ ಅಷ್ಟೇ. ಕರ್ನಾಟಕ ವಿದ್ಯಾವರ್ಧಕ ಸಂಘದ ಸ್ಥಾಪನೆಗೆ ಕಾರಣರಾದ ಶಾಮರಾಯ ಕಾಯಕಿಣಿಯವರ ವಂಶಸ್ಥರೂ ಇಲ್ಲಿಯೇ ಇದ್ದಾರೆ. ಕೋಳಿ ಕೂಗುವ ಮುನ್ನ ಎದ್ದು ದಯಾಳು ದೇವನನ್ನು ಹಳದಿಪುರಕರರು ನೆನೆವುತ್ತಿರುವುದು ಕನ್ನಡ ದಾಸರ ಹಾಡು, ಸುಳಾದಿಗಳಿಂದ. ಕನ್ನಡ ಸೇವೆಗೆ ಮಾಂಜರೇಕರರ ಕೊಂಕಣಿ ತಾಯ್ನುಡಿ ಅಡ್ಡ ಬಂದಿಲ್ಲ. ಇವರೆಲ್ಲರ ನೆರವಿನಿಂದ ಕನ್ನಡದ ಏಳಿಗೆ ಮಾಡುವುದು ಕಾರವಾರದ ಮಕ್ಕಳ ಕರ್ತವ್ಯ.

ಕಾರವಾರದ ಕನ್ನಡದ ಕ್ಷಿತಜದಲ್ಲಿ ಆಸೆಯ ಅರುಣೋದಯವಾಗುತ್ತಲಿದೆ. ಮಕ್ಕಳೆಲ್ಲ ಕನ್ನಡನುಡಿಯ ಮೇಲ್ಮೆಗಾಗಿ ನಾಡಿನೊಗ್ಗಟ್ಟಗಾಗಿ ಶಕ್ತಿ ಸಿಡಿಯೆ ದುಡಿಯುವ ಸಂಕಲ್ಪ ಮಾಡುತ್ತಲಿದ್ದಾರೆ. ಕನ್ನಡದ ಕಿರಣಗಳೆಲ್ಲ ಕೂಡಿ ಬೆಳಕನ್ನುಂಟುಮಾಡಲಿವೆ. ಹಿರಿಯರು ಮಕ್ಕಳ ಒಲವನ್ನು ಅರಿತು ಅವರನ್ನು ಹರಸಬೇಕು; ಬೆಂಬಲಕ್ಕೆ ನಿಲ್ಲಬೇಕು. ಮಾತೃಭಾಷೆಯ ನಂತರ ಕನ್ನಡಕ್ಕೇ ಸ್ಥಾನ ಕೊಡಬೇಕೆಂದೂ, ಪ್ರತಿಜ್ಞೆ ಮಾಡಬೇಕೆಂದೂ, ಮಾಸ್ತಿಯವರ ವ್ಯಾಖ್ಯಾನವಾದ ಸಮಯದಲ್ಲಿ ಮಕ್ಕಳ ಮನೋಗತವನ್ನು ಸೂಚಿಸಿದ 'ನಮ್ಮ ಪುಸ್ತಕಾಲಯ' ವೆಂಬ ಸಂಸ್ಥೆಯನ್ನು ಎಳೆಯರೂ ವಿದ್ಯಾರ್ಥಿಗಳೂಕೂಡಿ ಕಟ್ಟಿದ್ದಾರೆ.

ಮಗುವು ಯಾರ ಜೊತೆಗಿರುತ್ತದೆಯೋ ಅವರ ಭಾಷೆಯನ್ನು ಅರಿತುಕೊಳ್ಳುವುದು ಸ್ವಾಭಾವಿಕ. ಸುಮಾರು ನಾಲ್ಕಾರು ಇಯತ್ತೆ ಕಲಿತವನು ಮುಂದೆ ಓದಿಕೊಳ್ಳಲು ಆತನಿಗೆ ಒಂದು ಕನ್ನಡ ಪುಸ್ತಕವೂ ದೊರೆಯುವಂತಿಲ್ಲ. ಅಭ್ಯಾಸದ ಪಠ್ಯ ಪುಸ್ತಕವೋ ಉಕ್ಕಿನ ಕಡಲೆಯಿದ್ದಂತೆ. ಒಮ್ಮೆ ಇಂಗ್ಲೀಷು ಎರಡನೆ ಇಯತ್ತೆಯಲ್ಲಿ 'ಮೋಹನದ ತನಿರಸವೋ?' ಎಂದರೇನು ಸರ್, ಎಂದು ಒಬ್ಬ ವಿದ್ಯಾರ್ಥಿ ಕೇಳಿದನಂತೆ. 'ಥೂ ಕತ್ತೆ' ಮೋಹನದ ತನಿರಸವೆಂದರೆ ಮೋಹನದ ತನಿರಸವೆಂದು ಶಿಕ್ಷಕನೆಂದನೆಂದೂ, 'ಥೂ ಕತ್ತೇ' ಎಂಬುದೂ ಅರ್ಥವೆಂದೇ ಹುಡುಗ ಭಾವಿಸಿದನೆಂದೂ ಪ್ರತೀತಿ ಇದೆ. ಕನ್ನಡ ನಾಲ್ಕನೆ ಇಯತ್ತೆಯನ್ನು ಹೇಗೆ ಹೇಗೋ ಕಲಿತು ಇಂಗ್ಲಿಷು ಸಾಲೆಗೆ ಬಂದೊಡನೆಯೇ ಜೈಮಿನಿಯ ಕುಶ-ಲವರ ಬಾಲ್ಯ, ಇಲ್ಲವೆ ಠಾಕೂರರ ಎಲ್ಲಿ ಮನಕಳುಕಿರದೋ, ಇತ್ಯಾದಿ ಪದ್ಯವನ್ನು ಕಲಿಸಹತ್ತಿದರೆಂದರೆ ಎಲ್ಲಿಂದ ಕನ್ನಡದ ಅಭಿರುಚಿ ಬೆಳೆದೀತು? ಜಿಗುಪ್ಸೆ ಹುಟ್ಟದಿದ್ದೀತು?

ಕಾರವಾರವೇ, ಕನ್ನಡ ಕನ್ನಡ ಎಂದು ಕೂಗುವವರಿಗೆ ಆದರ್ಶವೂ ಹೌದು. ಪರೀಕ್ಷಾಕ್ಷೇತ್ರವೂ ಹೌದು. ಲಿಪಿ ವಿಶೇಷ ಸಾಹಿತ್ಯವಿಲ್ಲದ ಭಾಷೆಗಾಗಿ ಅಹರ್ನಿಶ ದುಡಿಯುತ್ತಿರುವವರಿಗೆ ಶತಮಾನಂಗಳ ಸಂಗ್ರಹ ಸಂಸ್ಕೃತಿ ಇರುವ ಕನ್ನಡಕ್ಕೆ ಇನ್ನಷ್ಟು ಹುರುಪಿನಿಂದ ದುಡಿಯಿರಿ ಎಂದು ದಾರಿತೋರುವ ನಂದಾದೀಪವೂ ಕಾರವಾರವೇ. ಅಲ್ಲದೆ ಸಂಸ್ಥಾನಗಳಲ್ಲಿ ಮರಾಠಿ ಭಾಷೆಯನ್ನು ತೆಗೆದು ಕನ್ನಡ ಭಾಷೆಯನ್ನು ಮಾಡಿಕೊಳ್ಳುವ ಬಂಟರೇ, ನಿಮ್ಮ ಆಸ್ತಿ—ಕನ್ನಡವನ್ನು—ಕನ್ನಡತನವನ್ನು ಉಳಿಸಿಕೊಳ್ಳಿರಿ ಎಂದು ಆಹ್ವಾನಿಸುವ ಸ್ಥಾನವೂ ಕಾರವಾರವೇ.

—ಮು. ಗ. ಶೆಟ್ಟಿ

———

# ಮಂಗಳೂರು

ಮಂಗಳೂರು ಕೋಟಿಯಲ್ಲದ ಕೋಟೆ. ಒಂದು ದೃಷ್ಟಿಯಿಂದ ಅದರಲ್ಲಿ ಇರುವ ಕನ್ನಡಕ್ಕಿಂತ ಇಲ್ಲದಿರುವ ಕನ್ನಡ ಹೆಚ್ಚು. ಇನ್ನೊಂದು ದೃಷ್ಟಿಯಿಂದ ನೋಡಹೋದರೆ—ಕನ್ನಡ ಬೇಕಿರಲಿ, ಬೇಡವಾಗಲಿ–ಕನ್ನಡವನ್ನು ಮಾರಿ ಜೀವಿಸುವ ಉಪಜೀವಿಗಳು ಬಹಳ. ಈ ನಗರಕ್ಕೆ ಕನ್ನಡ ಜಿಲ್ಲೆಯ ರಾಜಧಾನಿಯ ಪಟ್ಟ ಸಲ್ಲುತ್ತಿದೆ. ಆದುದರಿಂದ ಕನ್ನಡದ ಹೊರಗಂತು ಅದನ್ನು ನಿಲ್ಲಿಸುವ ಹಾಗಿಲ್ಲ. ಒಳಗೆ ನಿಲ್ಲಿಸೋಣವೆಂದರೆ, ಆ ಶ್ರದ್ಧೆ ಊರಿಗಿಲ್ಲ.

ಕನ್ನಡದ ಹೊಸ ಯುಗವು ಪ್ರಾಪ್ತಿಸಿದುದು ಮಂಗಳೂರಿನಲ್ಲಿ. ಅಲ್ಲೇ ಕನ್ನಡದ ಮೊದಲಿನ ಪತ್ರಿಕೆ, ಮುದ್ರಣಾಲಯಗಳಾದುವು. ಸುಮಾರು ನೂರು ವರ್ಷಗಳ ಹಿಂದೆ ಕಲ್ಲಚ್ಚಿನ ಛಾಪಖಾನೆಯಲ್ಲಿ ಬರಹಗಳು ಕಾಣಿಸಿಕೊಂಡವು. ಜಿಲ್ಲೆಯಲ್ಲಿ ಮೊದಲಿನ ಕನ್ನಡ ಪ್ರಚಾರ ನಡೆದುದು—ಬಾಸೆಲ್ ಮಿಶನ್‌ಸವರ ಕೈಯಲ್ಲಿ. ಎಷ್ಟು ಬಗೆಯ ಸೇವೆ ಅವರು ನಡೆಸಿದರೆಂದೂ ಹೇಳಲಾಗದು. ಶಬ್ದಕೋಶ, ವ್ಯಾಕರಣ, ಜೀವಶಾಸ್ತ್ರ, ಶಾಲಾಪುಸ್ತಕಗಳು, ಕೊನೆಗೆ ತಮ್ಮ ಮತಪ್ರಚಾರದ ಒಡವೆಗಳು–ಎಲ್ಲವನ್ನು ಕನ್ನಡಕ್ಕೆ ತೊಡಗಿದರು. ಈ ಪ್ರೊಟೆಸ್ಟಂಟ ಜನರು ಅಂದು ಮಾಡಿದ ಕೆಲಸ ಬಹಳ. ಈಗ ಅವರ ಬಳಗ ತುಸು ಉಸಿರು ತಗ್ಗಿಸಿಕೊಂಡಿದೆ. ಆದರೆ ಈಗಿನ ಮಂಗಳೂರನ್ನು ನೆನೆಯುವಾಗ ಮಾತ್ರ ಒಂದು ವಿಚಾರ ತಿರುತಿರುಗಿ ನೆನಪು ಮಾಡುತ್ತದೆ.

ಪ್ರೊಟೆಸ್ಟಂಟರು ನಮ್ಮ ಜಿಲ್ಲೆಯ ಕನ್ನಡದ ಬದುಕಿಗೆ ಎಷ್ಟು ಜೀವ ತೆತ್ತರೋ, ಈಗಿನ ಕೆಥೊಲಿಕ್ ಜನರ ಹಿರಿಯರು—ಅಷ್ಟೇ ಬಗೆಯಿಂದ ಅಪಹರಿಸಲೆತ್ನಿಸುತ್ತಿದ್ದಾರೆ. ಈ ಊರಿಗೆ ಬಂದ ಪ್ರೊಟೆಸ್ಟಂಟರು ಇಲ್ಲೆ ಬಾಳಿ, ಒಂದಾಗಲೆತ್ನಿಸಿದರೆ— ಇದೆ ಊರಿನ ಈಗಿನ ಕೆಥೊಲಿಕ್ ಮುಖಂಡರು—ಕನ್ನಡ ನಮಗೆ ಬೇಕಿಲ್ಲ; ಜರ್ಮನ್, ಎಸ್ಕಿಮೋ, ಚೀನಿ ಭಾಷೆಗಳಷ್ಟೇ—ನಮಗೆ ಅದು ಹೊಸತಾದುದು ಅನ್ನುತ್ತಾರೆ !

ಮಂಗಳೂರಿನ ಜನರಲ್ಲಿ ವಿಚಿತ್ರವಾದ ಕೂಟವಾಗಿದೆ. ಕೊಂಕಣಿ ಮನೆಮಾತನಾಡುವ ಕೆಥೊಲಿಕರೇ ಅವರಲ್ಲಿ ಬಲಿಷ್ಠರು. ಈ ಜನರ ಸಂಪತ್ತು ಕನ್ನಡ ನಾಡಿನ ಮಲೆಗಳಿಂದಲೇ ಬರಬೇಕು. ಆದರೂ—ಕೆಲವೊಂದು ಜನರ ಸಲುವಾಗಿ ತಮ್ಮ ತಾಯ್ನಾಡು, ದ. ಆಫ್ರಿಕ, ಮುಂಬಯಿ ಈ ಯುದ್ಧವಿಲ್ಲದಿದ್ದರೆ ಇಟಲಿ—ಎಂದೂ ತಿಳಿಯಬಲ್ಲರು. ಅಂತು ಕನ್ನಡವಲ್ಲ. ಮನೆಯ ಮಕ್ಕಳು—'ಮೆಮಿ, ಡಾಡಿ' ಗಳೆನ್ನುವರೇ ಹೊರತು ಅಮ್ಮ, ಅಪ್ಪ ಅನ್ನರು. ಕೊಂಕಣಿಯಲ್ಲಿ 'ಆಸು, ಅಮ್ಮ ಎನ್ನುತ್ತಾರೆಯೇ' ಎಂಬುದೂ ಸಂಶಯ.

ಇನ್ನು ವಾಸ್ತವವಾಗಿ ಇದು ತುಳುವ ನಾಡಿನ ಭಾಗ. ಹಿಂದುಸ್ಥಾನಿ, ಮಳಿಯಾಳಿಯ ಒಗ್ಗರಣೆಯೂ ತಕ್ಕಷ್ಟು ಇದೆ. ವ್ಯವಹಾರದ ಮಾತು ಕನ್ನಡ, ನಾಡಿನ ಮಾತು ಕನ್ನಡ.

ಹಿಂದೊಮ್ಮೆ ಇಲ್ಲಿ ತುಳುವನ್ನು ನಾಡಿನ ಮಾತಾಗಿ ಮುಂದೆ ತರಲು ಒಬ್ಬರು ಯತ್ನಿಸಿದರು ಅವರ ಯತ್ನವೂ ಮಾಯವಾಯಿತು, ಅವರೂ ಮಾಯವಾದರು. ಈಗ 'ಕನ್ನಡ'ಕ್ಕೆ ವಿಘ್ನ ತರುವ ದೃಷ್ಟಿಯಿಂದಲಾದರೂ ದೇಶಭಾಷೆ, ಮನೆಭಾಷೆಗಳ ಚಳವಳ ಇದೆ.

ಈ ಊರಲ್ಲಿ ಹಿಂದೆ ಹಲವು ಕನ್ನಡಿಗರು ಹೆಸರು ಪಡೆದರು. ಮಂಗೇಶರಾಯರು, ಕಾಮತರು-ಮಂಗಳೂರಿನ ಮೂರ್ತಿಗಳೇ. ಮಂಗಳೂರಿನ ಕನ್ನಡಕ್ಕೆ ಮರ್ಯಾದೆ ಬರುವಂತೆ ಮಾಡಿದ ಹೆಸರುಗಳೂ ಇದ್ದುವು; ಪತ್ರಿಕೆಗಳೂ ಇದ್ದುವು. ಈಗಲೂ ಇವೆ. ಆದರೆ 'ಕನ್ನಡದ ಒಂದು ವಿಶೇಷವಾದ ಮಮತೆಯಾಗಲಿ, ಆದರವಾಗಲಿ' ನಗರದ ಜೀವಾಳವಾಗಿ ಕಾಣಿಸುತ್ತಲಿಲ್ಲ.

ಇಲ್ಲಿನ ಕನ್ನಡ ಪತ್ರಿಕೆಗಳು ಸಂಖ್ಯೆಯಲ್ಲಿ ಹಲವು ಇವೆಯಾದರೂ, ಕನ್ನಡಿಗರ ನೆರವಿನ ಮೇಲೆ ಬದುಕುವ ಮಾತು ಸುಳ್ಳು. ಜಾಹೀರಾತು ಕೊಡುವವದರಿಂದಲೇ ಬದುಕಬೇಕು. ಇಲ್ಲಿನ ಪುಸ್ತಕ ಪ್ರಕಾಶಕರ್ತರು—ಉಪಾಯಗಾಣದೆ ಕನ್ನಡಕ್ಕೆ ನೆಚ್ಚಿ ಬಿದ್ದಿದ್ದಾರೆ. ಉಪಾಯಗಾಣದೆ—ಎಂಬ ಮಾತು ಅದು ನಾಡಿನ ಭಾಷೆಯಾದುದರಿಂದ ಹೇಳುತ್ತಿದ್ದೇನೆ.

ಅವರ ಪ್ರಕಟನೆಗಳಲ್ಲಿ! ಸೇಕಡಾ ನೂರರಷ್ಟು ಎಂದರೆ ತಪ್ಪಾಗದು—ಶಾಲಾ ಪಠ್ಯಪುಸ್ತಕಗಳು. ಇದನ್ನು ಕೇವಲ ಕನ್ನಡದ ಸೇವೆಗಾಗಿಯೇ ಅಚ್ಚು ಹಾಕಿರುವುದನ್ನು ಬಿಟ್ಟರೆ, ಉಳಿದ ಸಾಹಿತ್ಯ ಕನ್ನಡದಲ್ಲಿ ಹುಟ್ಟು ತ್ತಲೇ ಇಲ್ಲ. ಬರೆಯುವ ಮುಂಚೆಯೇ 'ಟೆಕ್ಸ್ಟಬುಕ್ ಕಮಿಟಿಯ' ಮುಖ ಕಂಡು ಮುದ್ರಣವಾಗುವ ಗ್ರಂಥಸಮುದಾಯವನ್ನು ಬಿಟ್ಟರೆ ಉಳಿದವುಗಳು ಶೂನ್ಯವೆನ್ನುವಷ್ಟು ಕಡಮೆ.

ಹಿಂದೆ ಕನ್ನಡಕ್ಕೆ ಹಾಲೂಡಿದ ಮಿಶನರಿಗಳು ಇಂದು ಇದೇ ಧರ್ಮಕ್ಕೆ ಶರಣು ಹೋಗಿದ್ದಾರೆ. ಅವರ ಮತಪ್ರಚಾರದ ಗ್ರಂಥಗಳು ಕೂಡ ಮೊದಲಿನಷ್ಟಿಲ್ಲ.

ಇನ್ನು ಮಂಗಳೂರಿನ ಭಾಷಾಮಂಡಲಗಳೆಂದರೆ ಮುಖ್ಯ ಕಾಣುವುದು ಮಿತ್ರಮಂಡಲಿಯೊಂದೇ. ಅವರೂ ಬದುಕಲು ಟೆಕ್ಸ್ಟಬುಕ್ ಆಶ್ರಯ ವನ್ನೆ ಬೇಡುವ ಸ್ಥಿತಿಯಿದೆ. ಖಾಸಗಿ ದುಡಿತಗಳು ಬಲು ಕಡಿಮೆ ಯಾಗಿವೆ. ದುಡಿದರೂ ಛಾಪಖಾನೆಯ ಋಣಕ್ಕೆ ಕಟ್ಟುಬೀಳುವ ಸಾಹಸ ಗಳೇ ಆಗುತ್ತವೆ.

ಕನ್ನಡದ ಸಭೆಗಳಿಗೆ ಮಂಗಳೂರು ಆಶ್ರಯವೀಯುತ್ತಿದೆ. ಕೆಲ ವೊಂದು ರಾಜಕೀಯ ಭಾಷಣಗಳು ತುಳು-ಕನ್ನಡಗಳಾಗುತ್ತಿವೆ. ಆದರೆ ಕನ್ನಡಕ್ಕೆ ಸಂಬಂಧಿಸಿದ ಸಭೆಗಳಾದರೆ 'ಸುಮಾರು ಅರ್ಧ ಡಜನ್ ಜನ ಗಳನ್ನು ಕಾಫಿ ಕೊಡಿಸುವ ಶರ್ಯತ್ತಿನಿಂದ ಕೂಡಿಸಬಹುದು. ೬೦,೦೦೦ ಜನಸಂಖ್ಯೆಯ ಊರಿನಲ್ಲಿ ಕನಿಷ್ಟ ೪-೭೦೦೦ ವಾದರೂ ಕನ್ನಡ ವಿದ್ಯಾರ್ಥಿ ಗಳಿರುವ ಊರಿನಲ್ಲಿ—ನೂರು ಜನರು ಸಿಗುವ ಭಾಗ್ಯ ಇನ್ನೂ ನಗರದ ಕನ್ನಡಕ್ಕೆ ಬಂದಿಲ್ಲ.

ಆದುದರಿಂದ ಮಂಗಳೂರನ್ನು ಎಲ್ಲಿಗೆ ಸೇರಿಸೋಣ, ಕನ್ನಡಕ್ಕೋ—ಎಂದು ಈಗ ತೀರ್ಮಾನಿಸುವ ಕಾರಣವಿಲ್ಲ. ಯೂರೋಪಿನ ಯುದ್ಧ ಸಮಾಧಾನವಾಗಲು, ಹಿಂದುಸ್ಥಾನಕ್ಕೆ ಸ್ವರಾಜ್ಯ ಹಾರಿಬರಲು, ದ. ಕನ್ನಡ ವನ್ನು ಅವರಲ್ಲಿ ಮಂಗಳೂರನ್ನು—ಮೈಸೂರಿಗೆ, ಕೇರಳಕ್ಕೆ, ತುಳುನಾಡಿಗೆ ಕೊಡುವ ನಿರ್ಧಾರವಾಗಲು—ಇಲ್ಲಿನ ಕೋಟೆ ಭದ್ರವಾದೀತು.

ಹಾಗೊಮ್ಮೆ ಆಗಲು ಕನ್ನಡವೇ ನಗರದಲ್ಲಿ ನಿಲ್ಲುವುದು ನಿಜವಾದರೆ—ತಾವು ಮೆಡಗಾಸ್ಕರಕ್ಕೆ, ಬೆಸ್ಸಿನೀಗೇ ಹೋಗಲು ಹೆಣಗಾಡುವ ಜನವರ್ಗ ಧಾರಾಳವಾಗಿದೆ.

—ಶಿವರಾಮ ಕಾರಂತ

---

# ಬಳ್ಳಾರಿ

ಗತವೈಭವದ ಸುವರ್ಣದಿನಗಳಲ್ಲಿ ಬಳ್ಳಾರಿಯು ಕರ್ನಾಟಕದ ಐತಿಹಾಸಿಕ ಕೇಂದ್ರಗಳಲ್ಲಿ ಒಂದೆನಿಸಿ ಮೆರೆದಿದೆಯಾದರೂ ಸಂಯುಕ್ತ ಕರ್ನಾಟಕದೊಂದಿಗೆ ಅದರ ಪರಿಚಯವು ತೀರಾ ಇತ್ತೀಚೆಯದು; ಅಂದರೆ ಹತ್ತಿಪ್ಪತ್ತು ವರ್ಷಗಳ ಈಚೆಯದು. ಬೆಂಗಳೂರು, ಮಂಗಳೂರು ಮೊದಲಾದ ಇತರ ಕರ್ನಾಟಕದ ಒಂದು ಕೊನೆಯವರೂ, ಕಾರವಾರ, ಧಾರವಾಡ ಮೊದಲಾದ ಕರ್ನಾಟಕದ ಇನ್ನಿತರ ಕೊನೆಯವರೂ ಭವ್ಯವಾದ ನಿಲ್ದಾಣವನ್ನು ಹಾದು ಎಷ್ಟೋ ಸಲ ಹೋಗಿರಬೇಕು. ಆದರೆ ಎಷ್ಟು ಜನರಲ್ಲಿ ಬಳ್ಳಾರಿ ನಮ್ಮ ಸೀಮೆಗೆ ಸೇರಿದ್ದೆಂಬ ಅಭಿಮಾನವು ಹಾದು ಹೋಗಿದೆಯೆಂದು ಹೇಳುವುದು ಕಷ್ಟಸಾಧ್ಯವಾಗಿದೆ. ಇಂದೂ ನಿಲ್ದಾಣದಲ್ಲಿ ಸ್ಥಳಸೂಚಕ ಹಲಗೆಯ ಮೇಲೆ ಇರುವುದು ತೆಲಗು ಲಿಪಿ. ಮದರಾಸು ಪ್ರಾಂತವೂ ಮೈಸೂರು ಸೀಮೆಯೂ ಬಳ್ಳಾರಿಯನ್ನು ಕಂಡದ್ದೆಂದರೆ ತೆಲಗು ರಂಗಭೂಮಿಯ ಮೇಲೆಯೆ. ರೈಲುದಾರಿಯು ಹೊಸದಾಗಿ ವ್ಯಾಪ್ತವಾದ ಉಪನಗರವನ್ನು ಸೀಳಿಕೊಂಡು, ಮುಂದುವರಿದು ನಿಲ್ಮನೆಯನ್ನು ಬಳಿಸಿಕೊಂಡು, ದೊಡ್ಡದೊಂದು ಕೆರೆಯ ಬಲಭಾಗದಿಂದ ಕೋಟೆ, ಕೆಂಟೋನಮಿಂಟುಗಳ ನಡುವೆ ಹಾಯ್ದು, ಮುಂದೆ ಸಾಗಿ ಜೈಲುಖಾನೆಯ ಮನೆಗಳ ವಿಶಾಲವಾದ ಬಯಲುಗೋಡೆಯ ಬದಿಹೋಗಿ ಬೀಳ್ಕೊಂಡು ಮುಂದುವರಿಯುತ್ತದೆ. ರೈಲುಮಾರ್ಗದ ಇಕ್ಕಡೆಯ ನೋಟವು ಹಗಲು ಸುಂದರವಾಗಿಯೂ ರಾತ್ರಿ ಮನೋಹರವಾಗಿಯೂ ಕಂಡು

ಬಳ್ಳಾರಿಯು ದೊಡ್ಡದೊಂದು ಸುಂದರ ನಗರವಿರಬೇಕೆಂಬ ಕಲ್ಪನೆಯನ್ನು ಹೊಸಬರ ಮನಸ್ಸಿಗೆ ತಾರದೆ ಹೋಗದು. ರಾತ್ರಿಯಲ್ಲೋ ರಹದಾರಿಯ ಪಾರ್ಶ್ವದ ಎರಡೂ ಬದಿಗೆ ವಿದ್ಯುದ್ದೀಪಗಳಿಂದ ಅಲಂಕೃತವಾಗಿ ನಿಂತಿರುವ ಬಂಗಲೆಗಳೂ, ಅವುಗಳ ಪ್ರಾಂಗಣದಲ್ಲಿ ಬೆಳೆಸಿದ್ದ ಹೂಗಿಡಗಳ, ಲತಾ ಮಂದಿರಗಳ, ಸಮೀಪದಲ್ಲೇ ಮಿನುಗುವ ದೀಪಮಾಲೆಗಳ ಚೇತೋಹಾರಿ ದೃಶ್ಯವೂ, ಜ್ಯೋತಿರ್ಮಾಲೆಗಳನ್ನಪ್ಪಿ ಬಿಳಿ ಮೈ ತೊಡಿಗೆಯಲ್ಲಿ ಹರಡಿ ಕೊಂಡಿರುವ ಕೆರೆಯ ಜಲರಾಶಿ, ಕೆರೆಯ ಮಧ್ಯದಿದ್ದು ಬೆಳಗುವ ವಿದ್ಯು ನ್ಮಂದಿರದ ನೋಟವೂ ಪ್ರವಾಸಿಗಳ ಹೃದಯವನ್ನು ಸೂರೆಗೊಳ್ಳುತ್ತಿವೆ. ಆದರೇನು? ಇಲ್ಲಿಗೆ ಮುಗಿಯಿತೆ ಊರು! ಮುಂದೆ ನಮಗೆ ಊರ ಮುನಸಿಪಾಲಿಟಿಯ ಅನುಭವವಾಗುವದು. ನಗರದ ಅಂಚಿನಂತಿರುವ ಈ ಎಲ್ಲೆಯನ್ನು ದಾಟಿ ಸ್ವಲ್ಪ ಮುಂದಿರುವ ಊರ ಒಡಲನ್ನು ಸೇರಿದೆವೆಂದರೆ, ಆ ಧೂಳು, ಆ ಹೊಲಸು, ಆ ಕೊಳೆ, ಆ ದುರ್ವಾಸನೆ, ಊರ ಮಧ್ಯೆ ಅಲ್ಲಲ್ಲಿ ಇರುವ ನಲ್ಲಿಗಳ ಪಕ್ಕಕ್ಕೆ ಇದ್ದ ಕೊಳೆತ ನೀರಿನಿಂದ ತುಂಬಿದ ಹೊಂಡಗಳು— ( ಈಗೀಗ ಕಾಲುವೆಗಳಾಗಿ ಕೆಲವು ಮುಚ್ಚಲ್ಪಟ್ಟಿವೆ. ) ಎಲ್ಲೆಲ್ಲೂ ಕಂಡು ಬಂದು ಕೈವಸ್ತ್ರದಿಂದ ಮೂಗು ಮುಚ್ಚಿಸುವುವು. ಬಳ್ಳಾರಿಯ ಸೊಳ್ಳೆಗಳು ಇಡೀ ಕರ್ನಾಟಕದಲ್ಲಿಯೇ ಹೆಸರುವಾಸಿಯಾಗಿ ರಬಹುದು. ಸೊಳ್ಳೆಗಳಂತೆ ಇಲ್ಲಿಯ ಉಪಹಾರಗೃಹಗಳು ಆ ಭವನ, ಈ ಭವನವೆಂದು ನಾನಾ ಭವನಗಳ ಹೆಸರಿನಿಂದ ಸುತ್ತಲಿನ ಜಿಲ್ಲೆಗಳಿಗೆಲ್ಲಾ ಖ್ಯಾತಿ ಪಡೆದಿವೆ. ಪ್ರವಾಸಿಕರಿಗೆ ಇವುಗಳ ಮಾಹಿತಿ ಮಾಡಿಕೊಡುವ ದಕ್ಕಾಗಿ ಜಾಹೀರಾತು ಕಾರ್ಯವು ಗುಂತಕಲ್ ಹೊಸಪೇಟೆಗಳಿಂದ ಆಗುವದಲ್ಲದೆ ಗಾಡಿ ಬರುವ ವೇಳೆಗೆ ಇವರ ಎಜಂಟರು ನಿಲ್ಮನೆಬಳಿ ಮಾವನ ಮನೆಗೆ ಅಳಿಯನನ್ನು ಕರೆದೊಯ್ಯಲು ಬಂದ ನೌಕರರಂತೆ ಹಾಜರು. ತಿಂಡಿಯ ಬ್ರಹ್ಮನ ದೇಗುಲದಂತೆ ಇರುವ ಈ ಭವನಗಳಲ್ಲಿ ಬೈಗೂ ಬೆಳಗೂ ತೆರವಿಲ್ಲದೆ ಬಂದು ಹೋಗುವ ಜನಪ್ರವಾಹದಿಂದ ತಿನ್ನುವ ತೇಗುವ ತಾಳಕ್ಕೆ, ರೇಡಿಯೋ ರಾಗದ ಸೂರು ಸೇರಿ ಬೀದಿಗಳ ಕಂಠದಿಂದ ಮಧುರ ನಾದವು ತೇಲಿ ಎಲ್ಲೆಲ್ಲಿಯೂ ಹರಿದು ಬಂದು, ಪೇಟೆಯ ಮೈಯಲ್ಲಿ ನಡೆದಾಡುವ ಹಾದಿಹೋಕರ ಕಿವಿಗಳನ್ನು

ತುಂಬುತ್ತವೆ. ನೂರಾರು ಸ್ಟೈಕಲ್ಲುಗಳು ಊಟದ ಡಬ್ಬಿಯನ್ನು ಹೊತ್ತು ಕೊಂಡು ಈ ಭವನಗಳಿಂದ ಹೊರಟು ಮನೆಮನೆಗೂ ಹೋಗಿ ಮುಟ್ಟಿಸು ವುದನ್ನು ನೋಡಿದರೆ ರಷ್ಯಾದಲ್ಲಿ ಮಾಕ್ಸಿಮ್ ಗಾರ್ಕಿ (Maxim Gorki) ಎಂಬಾತನು ಉಪನ್ಯಾಸದಲ್ಲಿ Catering of the whole country shall be done by large cafes' ಎಂದು ಹೇಳಿದ್ದ ವಾಕ್ಯವೊಂದರ ಜ್ಞಾಪ್ತಿಯಾಗುತ್ತದೆ. ಈ ಹೋಟಲು—ಧಂದೆಗಳನ್ನು ಮೊದಲಿಗೆ ಇಲ್ಲಿ ಹೂಡಿದವರೂ ಈಗ ಆದರ ಬಹುಭಾಗವನ್ನು ವಶದಲ್ಲಿ ಇಟ್ಟುಕೊಂಡವರೂ ಉಡುಪಿಯವರೆಂದು ಹೇಳಲು ಇತಿಹಾಸ ಸಂಶೋಧನೆ ಏನೂ ಬೇಕಾಗಿಲ್ಲ. ಇದು ಬೇರೆ ಭಾಗದ ಜನರ ಅನುಭವಕ್ಕೆ ಬಂದ ಮಾತು.

ಪಟ್ಟಣದ ಇತರ ವ್ಯವಹಾರಗಳಲ್ಲಿಯೂ ಹೊರಗಣವರ ವರ್ಚಸ್ಸು ಕಡಿಮೆಯಿದಲ್ಲ. ಲೇವಾದೇವಿಯ ಖಾತೆಯು ಒಂದು ರೀತಿಯಿಂದ ಸೇಟು ಮುಲ್ತಾನರ ಸ್ವಾಧೀನದಲ್ಲಿದೆ ಎಂದು ಹೇಳಿದರೂ ಹೇಳಬಹುದು. ಬಾಕೀ ವ್ಯಾಪಾರದಲ್ಲಿಯೂ ಮಾರವಾಡಿ ಕಚ್ಚಾಸೇಟುಗಳ ಕಡಿಮೆಯಲ್ಲದ ಭಾಗ ವನ್ನು ದೊರಕಿಸಿಕೊಂಡಿದ್ದಾರೆ. ಬಳ್ಳಾರಿಯು ಹಿಂದೊಮ್ಮೆ ಭಾರಿ ವ್ಯಾಪಾರಸ್ಥಳವೆಂದೆಣಿಸಿದ್ದರೂ ಈಗ ಅದರ ಬಹು ಭಾಗವು ಕಡಿಮೆಯಾಗಿದೆ; ಬೇರೆ ಕಡೆಗೆ ಹರಿದು ಹಂಚಿಹೋಗಿದೆ. ವ್ಯಾಪಾರದಲ್ಲಿ ಹಿಂದೆಯಾದರೂ ಇಲ್ಲಿಯ ಜನ ಖರ್ಚು ಮಾಡುವುದರಲ್ಲಿ ಹಿಂದಿರುವುದಿಲ್ಲವಂತೆ. ಅಂಗಡಿಗಳು ಕಡಿಮೆ ಇದ್ದರೂ ವಕಾಲತಿನ ಅಂಗಡಿಗಳಿಗೇನೂ ಕಡಿಮೆ ಇಲ್ಲ.

ಬಳ್ಳಾರಿಗೂ ಮಳೆಗೂ ಹಗೆತನ, ಬಹುಕಾಲದಿಂದ ಬೆಳೆದುಕೊಂಡು—ಬಂದುದು ಎಂತ ಕಾಣುತ್ತೆ. ಮುನಸಿಪಾಲಿಟಿಯವರು ನಲ್ಲಿ' (Pipe) ತಂದಾಗಿನಿಂದ ಮಳೆ ಮುನಿದರೆ ಅವಕ್ಕೇನೂ ಸೊಪ್ಪು ಹಾಕುವಂತಿಲ್ಲ. ಬಳ್ಳಾರಿಯ ಮೇಲೆ ಮಳೆಯ ಮುನಿಸು ಇರುವಂತೆ ಇದರ ಮೇಲೆ ಜಿಲ್ಲೆಯ ಯಾವೊತ್ತು ಹಳ್ಳಿಗಳ ಬಲುಮೆಯೂ ಇದೆ. ಹಳ್ಳಿಗಳಿಂದ ಧನ, ದವಸ ಗಳ ರಾಸಿ ಬಂದು ಬಿದ್ದು ಮಳೆಯ ಕೊರತೆಯು ನೀಗುತ್ತದೆ. ಹಳ್ಳಿಗಳಿಂದ ಧನ–ಧಾನ್ಯದ ಹೊಳೆ ಹರಿದುಬಂದರೆ ಇಲ್ಲಿಂದ ಹಳ್ಳಿಗಳಿಗೆ ಹೋಗು ವವೇ ಸಾಲದ ಹೊರೆ. ನಲ್ಲಿಗಳು ನೀರಿನ ಕೊರತೆಗಳನ್ನು ಹೋಗ

ಲಾಡಿಸಿದರೂ ಮೇಲಿಂದ ಮೇಲೆ ಬರುವ ಬರಗಾಲವು ಒಕ್ಕಲಿಗರ, ಕೂಲಿ ಕುಂಬಳಿ ಮಾಡಿ ಹೊಟ್ಟೆ ತುಂಬಿಸಿಕೊಳ್ಳುವ ಜನರ ದೃಷ್ಟಿಯನ್ನು ಆಕಾಶದ ಕಡೆಗೆ ತಿರುಗಿಸುತ್ತದೆ. ಜನರಲ್ಲಿ ಧರ್ಮಸಂಕರಣ ಹೆಚ್ಚಿದ್ದರಿಂದ ಮಳೆ ಕಡಿಮೆಯಾಯಿತೆಂದು ಇಲ್ಲಿ ಸನಾತನಿಗಳ ಮತ. ಮಳೆಗಾಲದ ಮಳೆಯ ತಾಪತ್ರಯವಿದ್ದರೂ ಬೇಸಿಗೆಯ ಬಿಸಿಲಿಗೆ ತಾಪತ್ರಯವಿಲ್ಲ. ಆದರೆ ಬಯಸಿದರೆ ಸಿರಿವಂತರ ವಾಸಕ್ಕಾಗಿ ರಾಮನಮಲೆ ಮೊದಲಾದ ತಂಬೆಟ್ಟ ಗಳು ಸಮೀಪದಲ್ಲಿವೆ. ಹೇಗೆ ಊರ ವಾತಾವರಣವು ತೀವವಿಲ್ಲದುದೋ ಅದರ ವಿರೋಧವಾಗಿ ಜನತೆಯ ಮನೋರುಚಿ ರಸವತ್ತಾಗಿದೆ. ರಂಗ ಭೂಮಿಯೆಂದರೆ ಪಂಚಪ್ರಾಣ. ಬಳ್ಳಾರಿಯು ಎರಡು ಮೂರು ತಲೆಮಾರು ಗಳಿಂದ ನಾಟ್ಯಕಲೆಯನ್ನು ಪೋಷಿಸಿಕೊಂಡು ಬಂದುದಲ್ಲದೆ ಅನೇಕ ಪ್ರಸಿದ್ಧ ನಟರು ಹಿಂದೆ ಆಗಿಹೋದುದಲ್ಲದೆ ಇಂದೂ ಇದ್ದಾರೆ. ಒಬ್ಬಿಬ್ಬರು ನಾಟಕ ಕಾರರು ಆಂಧ್ರ ದೇಶದಲ್ಲಿ ಪ್ರಶಸ್ತಿಯನ್ನು ಹಿಂದೆ ದೊರಕಿಸಿಕೊಂಡಿದ್ದಾರೆ. ಹಿಂದೆ ಇಲ್ಲಿಯೂ ಪ್ರತಿಭಾಶಾಲಿಗಳಾದ ಕನ್ನಡ ನಾಟಕಕಾರರು ಇದ್ದರೆ? ಇದ್ದರೆಂಬುದು ಇಂದು ಯಾರೂ ನಂಬದ ಮಾತಾಗಿ ಮಾತ್ರ ಉಳಿದಿದೆ. ಅವರು ರಚಿಸಿದ ಅತ್ಯುತ್ತಮ ನಾಟಕಗಳು ಬೆಳಕು ಕಾಣದೆ ಹೋಗಲಿಲ್ಲವೆ? ಆದರೆ ಅಂದು ಇಂದು ತೆಲಗು ನಾಟಕಗಳ ಕೀರ್ತಿಲತೆಯನ್ನು ಬೆಳಗಿಸುವ ನಟರೂ ಉದಾರ ಪ್ರೋತ್ಸಾಹವನ್ನಿತ್ತ ಈಯುತ್ತಲಿರುವ ಜನರೂ ಯಾರು? ಕನ್ನಡಿಗರು! ಕನ್ನಡದ ಕಿಡಿಗಳು! ಜನರಲ್ಲಿ ನಾಟ್ಯಕಲೆಗಾಗಿರುವ ಪ್ರೀತಿ ಯಷ್ಟು ಸಾಹಿತ್ಯ ಕಲೆಯಲ್ಲಿ ಇಲ್ಲದೆಹೋದರೂ ಹೊರಗಿನಿಂದ ಉಪ ನ್ಯಾಸಕರು ಬಂದರೆ ಭಾಷಣ ಕೇಳಲು ಮುಕ್ಕರಿಸುವುದೊಂದು ಇಲ್ಲಿಯ ವೈಶಿಷ್ಟ್ಯವೆನ್ನಬಹುದು. ಇಷ್ಟಕ್ಕೇನೇ ಇಲ್ಲಿಯ ವೈಶಿಷ್ಟ್ಯ ತೀರಿದಂತಾಗ ಲಿಲ್ಲ. ಎಲ್ಲದಕ್ಕೂ ವಿಚಿತ್ರವಾದ ಪ್ರಶ್ನೆಯೆಂದರೆ ಕನ್ನಡ ನುಡಿಯ ಪ್ರಶ್ನೆ. ಇಲ್ಲಿಯೇನು ಗಂಗಾಧರರಾಯರೂ, ಲಕ್ಕೊಯವರೂ ಇಲ್ಲದೆ ಇಲ್ಲ. ಆದರೂ ಬೆಳಗಾವಿಗಿದ್ದ ವೈಯಕ್ತಿಕವಾದ, ಕರ್ನಾಟಕದ ಇತರ ಭಾಗದಲ್ಲಿ ಇಲ್ಲದಿದ್ದ ಒಂದೆರಡು ಸಮಸ್ಯೆಗಳನ್ನು ಬಳ್ಳಾರಿಯು ಸ್ವತಂತ್ರವಾಗಿ ಬಿಡಿಸಿಕೊಳ್ಳ ಬೇಕಾದ ಹೊಣೆಗಾರಿಕೆಯು ತಪ್ಪಿಲ್ಲ. ಬೆಳಗಾವಿಯಲ್ಲಿ ಅತ್ತ ಮರಾಠಿಯೂ ಬೇಡ, ಇತ್ತ ಕನ್ನಡವೂ ಬೇಡೆಂಬ ಜನವರ್ಗ ಇದೆಯೊ ಇಲ್ಲವೊ? ಆದರೆ

ಇಲ್ಲಿಯ ವೈಶಿಷ್ಟ್ಯವೆಂದರೆ ಹೆಣ್ಣು ಆಗಲಾರೆ ಗಂಡೂ ಆಗೆನೆಂಬ ಜನತೆ ಯುಂಟು. ಒಂದೆರಡು ವರ್ಷಗಳ ಹಿಂದೆ ಈ ಜನ ಒಂದು ಸರ್ವಸ್ವತಂತ್ರ ವಾದ ಪ್ರಾಂತ ಬೇಕೆಂದಿದ್ದರೂ ಈಗ ಆರ್ಥಿಕ ಸುಧಾರಣೆಯಾದರೆ ಸಾಕೆಂದು ಮೇಲೆ ಹೇಳುತಲಿದ್ದಾರೆ. ಮುಂದೆಯೊ? ಯಾವ ಹುತ್ತದಲ್ಲಿ ಯಾವ ಹಾವಿದೆಯೋ ಯಾರಿಗೆ ಗೊತ್ತು? ಇಲ್ಲಿಯ ಕನ್ನಡದ ಸ್ಥಾನಮಾನಗಳು ಸೋಜಿಗದ ಸೋಜಿಗವಾಗಿವೆ (Phemena). ಬಳ್ಳಾರಿಯವರಂತಹ ಕನ್ನಡಿಗರು ಬಳ್ಳಾರಿಯಲ್ಲೇ ದೊರೆತಾರು. ಈ ಜನರಿಗೆ ಕನ್ನಡ ನುಡಿಯ ಬಗ್ಗೆ ಅಭಿಮಾನವಿದೆ. ಆಂಧ್ರ ಪ್ರಾಂತದಲ್ಲಿ ಮೋಹವಿದೆ. ರಾಯಲ ಸೀಮೆಗಾಗಿ ಉತ್ಸಾಹವಿದೆ. ಮುನಿಸಿಪಾಲಿಟಿ, ಕಾಂಗ್ರೆಸ್, ಬಾರರೂಮು, ಬೇರೆ ಸಂಘ ಸಂಸ್ಥೆಗಳು ಎಲ್ಲದರಲ್ಲೂ ಇವರ ವ್ಯಾಪ್ತಿ ಇದ್ದು ತೆಲುಗಿಗೆ ಅಲ್ಲಿ ಮಾನ; ನಾಲಗೆಯಲ್ಲಿ ಕನ್ನಡಕ್ಕೆ ಸ್ಥಾನ. ಮುನಿಸಿಪಾಲಿಟಿ ಶಾಲೆ ಯಲ್ಲಿ ಓದುವವರೂ ಓದಿಸುವವರೂ ಕನ್ನಡಿಗರು ಹೆಚ್ಚಿದ್ದು, ಓದಿಸು ವುದೂ ಓದುವುದೂ ತೆಲುಗಿನಲ್ಲಿಯೇ ಹೆಚ್ಚಿದೆ. ಆದರೆ ಮುನಿಸಿಪಲ್ ಕೌನ್ಸಿಲಿನಲ್ಲಿ ಕನ್ನಡಿಗರೇ ಬಹುಸಂಖ್ಯಾಕರೆಂದು ಸಾಧಾರಣವಾಗಿ ತಿಳಿಯ ಬಂದಿದೆ.

ಕರ್ನಾಟಕದ ಇತರ ಕಡೆಯಂತೆ ಇಲ್ಲಿಯೂ ಕಾಂಗ್ರೆಸ್ ಕಾರ್ಯಾ ಲಯವುಂಟು. ಆದರೆ ಕಾಂಗ್ರೆಸ್ ಸದಸ್ಯರ ಸಂಖ್ಯೆ ಇತರ ಜಿಲ್ಲೆಗಳ ಸಂಖ್ಯೆಗೆ ಹೋಲಿಸಬಾರದು. ಈ ಜಿಲ್ಲೆಗೆ ಎರಡು ಕಾಂಗ್ರೆಸ್ ಸರ್ಕಲು ಗಳಿರುವುದೇ ಇದಕ್ಕೆ ಕಾರಣವಾಗಿರಬೇಕು. ಚುನಾವಣೆಯಲ್ಲಿ ಕಾಂಗ್ರೆಸ್ಸಿ ಗಾಗಿ ಬಳ್ಳಾರಿ—ಕನ್ನಡಿಗರ ಕರ್ನಾಟಕ ದೃಷ್ಟಿಯು ರಾಷ್ಟ್ರಭಾವನೆಯಿಂದ ವಿಶಾಲವಾಗಿ ಮುಂದರಿಯಿತು. ಚುನಾವಣೆಯಲ್ಲಿ ಆರಿಸಿ ಬಂದವರಲ್ಲಿ ಯಾರು ಯಾವ ದೃಷ್ಟಿಯಿಂದ ಕರ್ನಾಟಕವನ್ನು ಮರೆತಿದ್ದಾರೆಂಬುದು ತಿಳಿಯದು. ಚುನಾವಣೆಯಲ್ಲಿ ಯಶಸ್ವಿಯಾಗಲು ಕನ್ನಡಿಗರ ಸಹಾನುಭೂತಿ, ಬೆಂಬಲ ಸಿಗಲಿ; ಆರಿಸಿ ಬಂದ ಮೇಲೆ ಕರ್ನಾಟಕದ ಹಿತ ಯಾಕೆ?

ಕಾಂಗ್ರೆಸ್ ಸಂಸ್ಥೆಯಲ್ಲದೆ ಇನ್ನೂ ಅನೇಕ ಸಂಘಗಳೂ ಸಂಸ್ಥೆಗಳೂ ಇಲ್ಲಿವೆ. ಇವುಗಳಲ್ಲಿ ರಾಜಕೀಯ ವಾದವಿಲ್ಲ. ಈ ಸಂಸ್ಥೆಗಳಲ್ಲಿ ಅನಾಥಾಲಯವೊಂದು. ಆದರೆ ಆಲಯವು ಸಮಾಜದಿಂದ ಪರಿತ್ಯಕ್ತವಾಗಿ

ಅನಾಥವಾದಹಾಗಿದೆ. ಇಲ್ಲಿ ಸಂಘಗಳೊಂದೇ ಅಲ್ಲದೆ ಸುಧಾರಕರೂ ಇದ್ದಾರೆ. ಸುಧಾರಕರನ್ನು ಸುಧಾರಿಸದೇ ಇಲ್ಲಿಯ ಜನತೆಯು ಸುಧಾರಿಸುವಂತಿಲ್ಲ. ವೀರಶೈವರ ವಿದ್ಯಾಪ್ರಚಾರವನ್ನು ಪ್ರಾಧಾನ್ಯವಾಗಿ ಇಟ್ಟುಕೊಂಡು ಕೆಲವು ವರ್ಷಗಳ ಹಿಂದೆ ಸ್ಥಾಪಿತವಾದ, ಮದರಾಸು ವೀರಶೈವ ವಿದ್ಯಾವರ್ಧಕ ಸಂಘವು ನೂರಾರು ವಿದ್ಯಾರ್ಥಿಗಳಿಗೆ ಧನಸಹಾಯುವನ್ನಿತ್ತು ಲಿಂಗಾಯತ ತರುಣ ವರ್ಗದ ವಿದ್ಯಾರ್ಜನೆಗೆ ಸಾಧಕವಾಗಿ ನಿರೀಕ್ಷಣೆಗಿಂತಲೂ ಹೆಚ್ಚು ಕಾರ್ಯವನ್ನು ಎಸಗಿದೆ. ಈ ಸಂಘವು ಕನ್ನಡ ಶಿಕ್ಷಣ ಪ್ರಸಾರಕ್ಕಾಗಿ ಒಂದು ಉನ್ನತ ಪ್ರಾಥಮಿಕ ಶಾಲೆ (Higher grade elementary School) ಯನ್ನು ಬಹು ಯಶಸ್ವಿಯಾಗಿ ನಡೆಸಿಕೊಂಡು ಬಂದಿದೆ. ಆದರೆ ಕನ್ನಡಿಗರ, ಕನ್ನಡ ನುಡಿಯ ದೃಷ್ಟಿಯಿಂದ ಇಡೀ ಬಳ್ಳಾರಿ ಪಟ್ಟಣಕ್ಕೆ ಒಂದೇ ಒಂದು ಕನ್ನಡ ಶಾಲೆಯು ಸಾಕೆ? ಅಲ್ಲದೆ ನುಡಿಯ ಸೇವೆಯೇ ಗುರಿಯಾಗಿರುವ ' ಜಿಲ್ಲಾ ಕರ್ನಾಟ ಸಂಘ ', ' ಸಾಹಿತ್ಯ ವಿದ್ಯಾರ್ಥಿ ಸಂಘ ', ' ಗೆಳೆಯರ ಗುಂಪು ' ಮೊದಲಾದವುಗಳು ಹಲವಾರು ಇವೆ. ಇವುಗಳ ಗೊತ್ತು ಗುರಿಗಳು ಒಂದೇಯಾಗಿ ಹತ್ತಿರಹತ್ತಿರವಾಗುತ್ತಲಿದ್ದ ಕನ್ನಡಿಗರ ವಿಶ್ವಾಸಾಭಿಮಾನಗಳಲ್ಲಿ ' ರಾಮದುರ್ಗವು ' ಮೈದೋರಿದಂತಿದೆ. ಸಾಹಿತ್ಯ ಸಮ್ಮೇಲನವನ್ನು ಕುಂದಿಲ್ಲದೆ ನಡೆಸಿಕೊಂಡು ಬಂದ ಕಾರ್ಯಕರ್ತರಲ್ಲಿ ಸಹಕಾರವನ್ನು ತೋರಿಸಿದ ಜನಬಳಗದಲ್ಲಿ ಈ ದುರಂತವು ಯಾವ ಬಾಂಧವ್ಯವನ್ನು ಉಳಿಯಗೊಟ್ಟಿದೆ? ಇಂತಹ ಹತ್ತಾರು ಸಮ್ಮೇಲನಗಳನ್ನು ಮಾಡಬಲ್ಲ ಉತ್ಸಾಹಶಕ್ತಿಗಳು ಎತ್ತ ಬತ್ತಿಹೋದವೋ? ಜಾತಿ ಜಗಳದ ಅನಿಷ್ಟವು ಹಿಂದೆಗೈದ ಕೇಡೊಂದೇ ಸಾಲದೆಂದು ಜಾಗೃತಗೊಳ್ಳುತ್ತಿದ್ದ ಬಳ್ಳಾರಿಯ ಕನ್ನಡತ್ವಕ್ಕೆ ರಾಮದುರ್ಗ ದುರಂತವೂ ಬಂದು ಬಡಿಯಬೇಕೆ ?

ಸಂಘಗಳಲ್ಲದೆ ಇಲ್ಲಿ ಒಂದೆರಡು ಸಾರ್ವಜನಿಕ ವಾಚನಾಲಯಗಳೂ ಇವೆ. ಮುನಿಸಿಪಾಲಿಟಿಯ ಸಾರ್ವಜನಿಕ ವಾಚನಾಲಯದಲ್ಲೂ ತೆಲುಗಿನ ಆಳಿಕೆಯಂತೆ. ಅಲ್ಲಿ ಕನ್ನಡವು ಅಳುತಳುತ ಬಾಳುತಿದೆ—ಎಂದು ವರದಿ ಬಂದಿದೆ. ಕರ್ನಾಟಕವೂ ಭರತಖಂಡವೂ ಸಹಾನುಭೂತಿಯ ತವರುಮನೆ ಎನಿಸಿದ್ದರೆ ಕನ್ನಡನಾಡಿನಲ್ಲೆಲ್ಲ ಹರಿಯುವ ಈ ಭಾವನಾ–ನದಿಯ

ಮೂಲವು ಬಳ್ಳಾರಿಯಲ್ಲಿದೆ ಎಂದು ಹೇಳಬಹುದು. ತಮ್ಮ ಮಕ್ಕಳಿಗೆ ತೆಲುಗನ್ನು ಆಪೇಕ್ಷೆಯಿಂದ ಕಲಿಸುವ ಹೆತ್ತವರಿಂದ, ಶಾಲೆ ಲೈಬ್ರರಿಗಳಲ್ಲಿ ತೆಲುಗಿನ ಪ್ರಶಸ್ತಿಯನ್ನು ಕೊಡುವ ಕನ್ನಡ ಸದಸ್ಯರಿಂದ 'ತೆಲುಗಾದರೇನು, ಕನ್ನಡವಾದರೇನು' ಎಂಬ ಜನವರ್ಗದಿಂದ, 'ಕನ್ನಡ ಮನೆ ಮಾತು; ಅದು ಬಂದೇ ಬರುತ್ತದೆ; ತೆಲುಗು ಕಲಿತರೆ ಉಭಯಭಾಷಾ ಪ್ರವೀಣರಾದೇವು' ಎಂಬ ವಿದ್ಯಾರ್ಥಿಗಳಿಂದ ಕೂಡಿ ತನ್ನದಲ್ಲದ ಬೇರೆ ಭಾಷೆಯನ್ನವಲಂಬಿಸಿರುವ ಪಟ್ಟಣವು ಬಳ್ಳಾರಿಯಲ್ಲದೆ ಬೇರೊಂದಿರಲಾರದು.

ಬಳ್ಳಾರಿಯನ್ನು ಕುರಿತು ಇನ್ನೇನು ಹೇಳಬಲ್ಲೆ ? ರಾಜಕೀಯ ಸಾರ್ವಜನಿಕ ಕಾರ್ಯದಲ್ಲಿ ಹಿಂದಿದೆಯೆಂದು ಹೇಳಿದ್ದರೆ ಚುನಾವಣೆಯಲ್ಲಿ ಕಾಂಗ್ರೆಸ್ ಪ್ರತಿನಿಧಿಗಳು ಯಾರೂ ಸೋಲದೇ ಹೋದರೇಕೆ ? ಸಾಹಿತ್ಯ ಸಮ್ಮೇಲನವು ಇಲ್ಲಿ ಎರಡು ಸಲ ಜರುಗಿದೆಯೆನ್ನಬಹುದು. ಹೊಸಗನ್ನಡ ಸಾಹಿತ್ಯಕ್ಕೆ ಬಳ್ಳಾರಿಯು ಯಾವ ಕೃತಿಗಳನ್ನು ಕಾಣಿಕೆಯಾಗಿ ಸಲ್ಲಿಸಲಿಲ್ಲವಾದರೂ ಸಾಹಿತ್ಯ ಸಮ್ಮೇಲನಕ್ಕೆ ಮಾತ್ರ ಒಬ್ಬ ಅಧ್ಯಕ್ಷರನ್ನು ಒದಗಿಸಿ ಕೊಟ್ಟಿದೆ. ಊರೆಂದಮೇಲೆ ಹೊಲಗೇರಿಯಿರದೆ ಸಾಧ್ಯವಿಲ್ಲ. ಇಲ್ಲಿ ಇರುವುದು ಎಂತಹ ಹೊಲಗೇರಿ ? ಅಲ್ಲಿ ಕಾಣುತ್ತಿರುವವು ಮನೆಗಳೋ, ಜೋಪಡಿಗಳೋ, ಗುಹೆಗಳೋ ? ಊರನ್ನು ಶುಚಿಮಾಡುವವರು ಇಲ್ಲಿ ಇದ್ದರೂ ಇದು ಶುಚಿಯಾಗಿರುವಂತಿಲ್ಲ. ಈ ಜನರಿಗೆ ಸಾಯುವತನಕ ಹೇಗೋ ಒಂದು ಬಗೆಯ ಬದುಕು ನೂಕುವುದೇ ಗುರಿ. ಈ ಗುಡಿಸಲ ನಡುವೆ ಹಾದುಹೋಗುವಾಗ ಶ್ರೀ ಕಾರಂತರ 'ಚೋಮನ ದುಡಿ'ಯ ಅನೇಕ ಸನ್ನಿವೇಶಗಳು ಕಣ್ಣೆದುರು ಚಲಿಸುವ ಹಾಗೆ ನೀರವಸ್ಮೃತಿ ಉಂಟಾಗುತ್ತದೆ. ನಾನೊಮ್ಮೆ ಅತ್ತ ಹೋದಾಗ ಕೆಲವು ಜೋಪಡಿಯ ಬಳಿ ಭೀಮಕಾಯದ ಪಠಾಣರು ಕೈಯಲ್ಲಿ ತೋರವಾದ ಬೆತ್ತ ಹಿಡಿದು ನಿಂತುದು ಕಾಣಬಂದಿತ್ತು. ಇದೇನೆಂದು ವಿಚಾರಿಸುವಾಗ ಇವರು ಬಡ್ಡಿ ವಸೂಲಿಗಾಗಿ ಬಂದಿದ್ದಾರೆಂದು ತಿಳಿದುಬಂತು. ಪಠಾಣರಿಂದ ತೆಗೆದುಕೊಂಡ ಹತ್ತೆಂಟು ರೂಪಾಯಿಗಳ ಸಾಲಕ್ಕೆ ತಿಂಗಳೂ ಹತ್ತೆಂಟು ಆಣೆ ಬಡ್ಡಿಯನ್ನು ಈ ಚೋಮರು ತೆರಬೇಕಾಗುವದು ! ಇನ್ನೂ ವಿಚಾರ ಮಾಡಿದಾಗ ಹತ್ತಿಪ್ಪತ್ತು ಪಠಾಣಿ ಇರಾಣಿಗಳು ತಮ್ಮಲ್ಲಿನ ನೂರಾರು ರೂಪಾಯಿ

ಬಂಡವಾಳದಿಂದ ಚರಿತಾರ್ಥವನ್ನು ಸಾಗಿಸುತ್ತಾರೆಂಬುದು ತಿಳಿದುಬಂತು. ಹರಿಜನ ವಸತಿಯೇ ಇವರ ಬ್ಯಾಂಕು (Bank). ಈ ಊರಲ್ಲಿ ಹರಿಜನ ಸೇವಾಸಂಘದ ಶಾಖೆಯೊಂದಿದೆ. ಅದರ ಕಾರ್ಯದರ್ಶಿಯೊಬ್ಬರು ನನ್ನೊಡನೆ ಮಾತಾಡುತ್ತ ಒಮ್ಮೆ ಹೇಳಿದ್ದರು; "ಹರಿಜನರಲ್ಲಿ ಅನೇಕರು ಒಂದೆರಡು ತಲೆಮಾರಿನ ಹಿಂದೆ ತಮ್ಮ ಹಿರಿಯರು ಯಾರೋ ಮಾಡಿದ್ದ ಋಣವನ್ನೂ ಬಡ್ಡಿಯನ್ನೂ ತೀರಿಸಲು ದುಡಿತದ ಕೊಂಚ ಭಾಗವನ್ನು ಮಾಸಲಾಗಿ ಪ್ರತಿ ತಿಂಗಳೂ ಕೊಡುತ್ತಿದ್ದಾರೆ. ಕೆಲವೆಡೆ ಒಂದೆರಡು ಪೀಳಿಗೆಯವರು ತೆತ್ತ ಹಣದಿಂದ ಮೂಲ ಸಾಲವು ಇನ್ನೂ ಉಳಿದಿದೆ. ಹೀಗಾಗಿ ತಂದೆಯು ಮಗನಿಗೆ ಬಿಟ್ಟುಹೋಗುವ ಆಸ್ತಿಯೆಂದರೆ ಈ ತೀರದ ಸಾಲ. ಅವನು ತನ್ನ ಮಗನಿಗೆ ಬಿಟ್ಟುಹೋಗುವುದೂ ಈ ತೀರದ ಸಾಲದ ಪರಂಪರೆಯನ್ನು." ಇಂತಹ ಗಳಿಕೆಯಿಂದ ಒಂದೆರಡು ಲಕ್ಷ ರೂಪಾಯಿಗಳವರೆಗೆ ಸ್ಥಿತಿ ಮಾಡಿ ಕೊಂಡಿದ್ದ ಮನೆತನಗಳ ಹೆಸರು ನನ್ನ ಕಿವಿಯವರೆಗೂ ಬಂದಿದೆ.

—ವಿಹಾರಿ

---

# ಆ ದ ವಾ ನಿ

ಧಾರವಾಡಕ್ಕೆ ಹುಬ್ಬಳ್ಳಿ ಹೇಗೋ ಬಳ್ಳಾರಿಗೆ ಆದವಾನಿಯು ಹಾಗೆ ಎಂದ ಕ್ಷಣ ನಮ್ಮ ಮೂಗು ಹಿಡಿಯುವ ಧೀರರು ಇದ್ದಾರೆ. ಎತ್ತ ಧಾರವಾಡ? ಎತ್ತ ಹುಬ್ಬಳ್ಳಿ? ಅದು ಬೊಂಬಾಯಿಗೆ ಹೊಂದಿದ್ದು. ಇದು ಮದ್ರಾಸಿಗೆ ಸೇರಿದ್ದು. ಅದು ಉತ್ತರ, ಇದು ದಕ್ಷಿಣ. ಆದರೆ ಇವೆಲ್ಲಕ್ಕೂ ಕರ್ಣಾಟಕದ ಮುದ್ರೆಯೊಂದು ಬಿದ್ದಿದೆ ಎಂದರೆ ಕೇಳಬೇಕೆ? ಇದನ್ನು ಕೇಳಿ ನೆಗೆದು ಕಿಡಿಕಿಡಿ ಹಾಯ್ದು ಬೀಳುವ ರಾಯಲ ಸೀಮೆಯವರು ಒಂದೆಡೆ ತಲೆ ಎತ್ತಿದ್ದಾರೆ. ಹೀಗೆ ಆದವಾನಿಯನ್ನು ನೆನೆದೆವೆಂದರೆ ವಿಷಾದವೆದ್ದು ನಿಂತು ನಮ್ಮ ಹೃದಯವನ್ನು ಚುಚ್ಚುತ್ತದೆ. ಕೇಳ್ಕರ ಅವರು ತಮ್ಮ ನಿರ್ಣಯವನ್ನು ಬಳ್ಳಾರಿಯ ಬಹಿರಂಗ ಸಭೆಯ

ಮುಂದಿಡಲು ಹೆದರಿದಂದು ಆದವಾನಿಯು ಸಭಾಂಗಣವಾಗಿ ಅವರ ನಿರ್ಣಯಕ್ಕೆ ಶರಣು ಹೋಗಲಿಲ್ಲವೆ? ಅಂದು ಕರ್ಣಾಟಕದಿಂದ ಸಿಡಿದು ಹೋಗಿ ಆಂಧ್ರರ ಮಡಿಲಿನಲ್ಲಿ ಬಿದ್ದು ಮಲಗೂಸಿನ ಹೀನಾಯದಿಂದ ಬೆಳೆದು ರೋಸಿಯೂ ಮತ್ತೆ ತನ್ನ ಮಡಿಲಲ್ಲಿ ಮೊನ್ನೆ ಮೊನ್ನೆ ರಾಯಲ ಸೀಮೆಗೆ ಹಾಲುಣಿಸಿ ಬೆಳೆಯಗೊಡಲಿಲ್ಲವೇ ? ಆದವಾನಿ ಆಗ ಬಳ್ಳಾರಿ ಯಿಂದ ಪ್ರತ್ಯೇಕಗೊಂಡದ್ದರಿಂದ ಅಲ್ಲಿ ಮತ್ತೆ ಕನ್ನಡದ ಅಧಿಷ್ಠಾನವಾಗಲು ಇಪ್ಪತ್ತು ವರ್ಷಗಳ ಕಾಲವನ್ನು ತಾಳಬೇಕಾಯಿತಲ್ಲವೆ ? ಈ ಮಧ್ಯದ ದಿನ ಗಳಲ್ಲಿ ಕನ್ನಡ ಶಾಲೆಗಳಿಗೆಲ್ಲಾ ಕ್ಷಯ ಬಂದಡರಿಸಿತು. "ಆದವಾನಿ ಪ್ರಾಂತದಲ್ಲಿ ಏನು ಮಾಯದಿಂದ ಕನ್ನಡ ಶಾಲೆಗಳಳಿದು ತೆನುಗು ಶಾಲೆ ಗಳಾದುವೋ" ಎಂದು ಎಮ್ಮಿಗನೂರ ಹಿರಿಯರೊಬ್ಬರು ಆಶ್ಚರ್ಯವನ್ನು ತೋರ್ಪಡಿಸಿದರು. ಆದರೆ ಈಗೀಗ ಆದವಾನಿ ಎಚ್ಚರಗೊಳ್ಳಹತ್ತಿದೆ.

ಅರಳೆಜಿನ್ನು, ಪ್ರೆಸ್, ಸೇಂಗ ಕಾರ್ಖಾನೆಗಳ ನಡುವೆ ಮುದುಡಿ ಕೊಂಡು ಕೂತ ಆದವಾನಿಯ ಕೈಹಿಡಿದು ತಮ್ಮ ಕಡೆಗೆ ಎಳೆದುಕೊಳ್ಳಲು ಕರ್ನಾಟಕಾಂಧ್ರಗಳೆರಡೂ ಯತ್ನಿಸಿವೆ. ಆದವಾನಿ ಯಾರಿಗೂ ಲಾಲಸೆ ಹುಟ್ಟಿಸುವುದು. ತನ್ನ ವ್ಯಾಪಾರ ಘನತೆಯಿಂದ ಆದವಾನಿ ಹುಬ್ಬಳ್ಳಿ ಇದ್ದ ಹಾಗೆ ಅಂದೆ. ಅದರಂತೆ ಇದೂ ದೊಡ್ಡ ಅರಳೆ ಅಂಗಡಿ. ಎಷ್ಟು ಅರಳೆ ಬಂದು ಬಿದ್ದರೂ ಆದವಾನಿಯು ಅದನ್ನು ಮುಂಬಯಿ ಪೇಟೆಯಲ್ಲಿ ಮಾರು ವುದಷ್ಟೇ ಆಗುವುದೇ ಹೊರತು ಅರಿವೆ ಗಿರಣಿ ಕಟ್ಟುವ ಸಾಹಸವನ್ನು ಚಿಂತಿಸಿಲ್ಲ. ಅರಳೆ ಗಂಟುಗಳಾದರೋ ಎಂಥ ಆವೇಶ ತರಬಲ್ಲವೆಂದು ನಾನು ಅಂದುಕೊಂಡಿರಲಿಲ್ಲ. ಕನ್ನಡಿಗರನ್ನು ಜಾಗ್ರತಗೊಳಿಸಲೆಂದು ಬಂದ ಕನ್ನಡ ಮುಖಂಡವಾಗ್ಮಿಗಳೊಬ್ಬರು ಇಂತಹ ವ್ಯಾಪಾರ ಸ್ಥಳವನ್ನು ಕರ್ನಾಟಕದಿಂದ ಬಿಟ್ಟುಕೊಡುವುದು ಅಸಾಧ್ಯವೆಂದು ಗರ್ಜಿಸಿದರು. ಅಂದಿನ ಅವರ ಆವೇಶಪೂರ್ಣ ಭಾಷಣ ಕೇಳಿದ ಕನ್ನಡಿಗರು ನಿಜವಾಗಿಯೂ ಕಣ್ದೆರೆ ದರು. ನಾವು ಕರ್ನಾಟಕದಿಂದ ಆಗಲಿ ಹೋಗೆವು ಎಂದು ಆಧವಾನಿಯವರು ಮುಂದನ್ನಬಹುದಾದುದಕ್ಕೆ ಪೀಠಿಕೆಯಾಯಿತು. ಆದವಾನಿ ಕನ್ನಡಿಗರು ಹಾಗೆನ್ನುವುದು ಎಷ್ಟು ಚೆನ್ನ! ಆದವಾನಿಯು ಎಷ್ಟು ಮಹತ್ವದಸ್ಥಳವೆಂಬದು

ಮೊಗಲಾಯಿ ಸಹ ಹೇಳಿತು. ಮೊಗಲಾಯಿ ಸರಹದ್ದಿನ ಒಳಗೆ ಬಹು ದೂರದ ವರೆಗೂ ತನ್ನ ವ್ಯಾಪಾರಮಂದಿರದ ಬುನಾದಿ ಹಾಕಿ ನಿಂತಿದೆ.

ಆದವಾನಿ ಎಚ್ಚರಗೊಳ್ಳಹತ್ತಿದೆ ಎಂದು ಹೇಳಿದೆ. ಈ ಕೀರ್ತಿಯ ಬಹುಭಾಗ ಕರ್ಣಾಟಕ ಸಂಘಕ್ಕೆ ಸಂದುದು ಎಂದರೆ ಕರ್ಣಾಟಕ ಸಂಘ ಸ್ಥಾಪನೆಯ ಹಿಂದೆಯೆ ಹುಟ್ಟಿಕೊಂಡ ಗೆಳೆಯರ ಗುಂಪು ನಮ್ಮ ಮೇಲೆ ಸುಳ್ಳು ಹೇಳಿದಂತೆ ಆಪಾದನೆಯ ಕಟ್ಟಳೆ ಹಾಕಬಹುದು. ಗೆಳೆಯರ ಗುಂಪು ಮಾಡುತ್ತಲಿರುವ ಕಾರ್ಯವು ಯಾವ ರೀತಿಯಿಂದಲೂ ಕಡಿಮೆ ಯದ್ದಲ್ಲವೆಂದು ಒಪ್ಪದೆ ಯತ್ನವಿಲ್ಲ. ಒಮ್ಮೆ ಆದವಾನಿ ಜಾಗ್ರತವಾಯಿತೆಂದರೆ ತೀರಿತು. ಅದರ ಪ್ರಗತಿಯ ವೇಗದ ಮುಂದೆ ಬಳ್ಳಾರಿಯ ಜಾಗ್ರತೆಯು ಕುಂಟುತ್ತದೆ. ಆದರೆ ಆದವಾನಿಯಲ್ಲಿ ಕನ್ನಡ ಚಳುವಳಿಯು ಇನ್ನೂ ಬೆಳೆಯಬೇಕು. ಕನ್ನಡ ಸಂಸ್ಕೃತಿಯ ಜ್ಞಾನವು ಆಗಬೇಕು. ಕನ್ನಡತನದ ಸ್ವಾಭಿಮಾನವು ಹೆಚ್ಚಬೇಕು. ಇದಕ್ಕಾಗಿ ಕನ್ನಡ ಹಬ್ಬಗಳೆಷ್ಟೋ ಉತ್ಸವಗಳೆಷ್ಟೋ ಜರುಗಬೇಕಾಗಿವೆ. ಕನ್ನಡ ಶಿಕ್ಷಣ ಪ್ರಸಾರದ ಬಗ್ಗೆ ಕರ್ನಾಟಕ ಸಂಘ, ಗೆಳೆಯರ ಗುಂಪು ದಕ್ಷತೆಯಿಂದ ಮುಂದುವರಿಯುತ್ತಿವೆ. ಒಂದು ಪ್ರಾಥಮಿಕ ಶಾಲೆಯನ್ನು ನಡೆಸಿಕೊಂಡು ಬಂದಿವೆ. ಹಲವು ಶಾಲೆಗಳಾಗುವುವು ಇವೆ ಎಂದು ಕೇಳಬಂದಿವೆ. ಶಾಲೆಯನ್ನು ಸ್ಥಾಪಿಸಿದಾಗ, ಸ್ಥಾಪಿಸಿದ ಬಳಿಕ ಬಹುಕಾಲ ಶಾಲೆಯ ಸಂಚಾಲಕರು ಬಳ್ಳಾರಿ ವೀರಶೈವ ವಿದ್ಯಾವರ್ಧಕ ಸಂಘದ ಬೆಂಬಲವನ್ನು ನಿರೀಕ್ಷಿಸಿದರು; ಕಾದಿದರು. ಆದರೆ ಆದವಾನಿ ಶಾಲೆಯನ್ನು ಸ್ಥಾಪಿಸಿದವರೆ ಅದರ ಭಾರವನ್ನು ಹೊರುವಂತಾಯಿತು. ಅವರಾದರೋ ಧೈರ್ಯಗೆಡದೆ ಶಾಲೆಯನ್ನು ಹೇಗೋ ನಿರ್ವಹಿಸಿಕೊಂಡು ಹೋಗಹತ್ತಿರುವುದು ಬೇರೆ ಮಾತು.

ಆದವಾನಿ ಚಂದದ ಪತ್ತನವೆಂದು ಹೇಳಹೋಗಲಿಯಾ? ಅದೇನೂ ಅಷ್ಟು ಚೆಲುವೆನಿಸಿ ತೋರದು. ದೊಡ್ಡ ಪಟ್ಟಣವೆಂದು ಹೇಳಲು ಅಷ್ಟೇನೂ ದೊಡ್ಡದಲ್ಲ. ದೊಡ್ಡ ಮಸೀದೆಯೊಂದಿದೆ ಎಂದು ಹೇಳಬಹುದು. ಆದವಾನಿ ಮೊಗಲರ ಆಳಿಕೆಯ ಭರಭರಾಟಕ್ಕೆ ಒಳಗಾಗಿದ್ದ ಕಾಲದಲ್ಲಿ ಕಟ್ಟಿಸಲ್ಪಟ್ಟ ಮಸೀದೆಯದು. ಊರಿಗೆ ಬಂದ ಹೊಸಬರು ಇದನ್ನು ನೋಡುವರು. ಚಿಕ್ಕವನಿದ್ದಾಗ ಆದವಾನಿಗೆ ಮೊದಲನೇ ಬಾರಿ ಹೋದಾಗ ನಾನೂ

ಒಳಗೆ ಹೋಗಿದ್ದಂತೆ ಜ್ಞಾಪಕ. ಆದವಾನಿಯನ್ನು ಕುರಿತು ಹೇಳಲೆಂದು ಏನಿದೆ? ಅದು ವ್ಯಾಪಾರದ ಹಂದರವೆಂದು ಹೇಳಿಯಾಯಿತು. ವ್ಯಾಪಾರವೇ ಆದವಾನಿಯ ಜೀವಾಳ. ಶ್ರೀಮಂತರು ಆದವಾನಿಯ ಉಸಿರು. ಆದವಾನಿಯು ಒಂದು ರೀತಿಯಿಂದ ಶ್ರೀಮಂತರ ಹಿಡಿತದಲ್ಲಿದೆ ಎಂದು ಹೇಳಲು ಅಡ್ಡಿಯಿಲ್ಲ. ಕಾಂಗ್ರೆಸ್ ಮೊದಲ್ಗೊಂಡು ಕಾರ್ಪರೇಷನ್ ರಾಜಕಾರಭಾರದವರೆಗೂ ಎಲ್ಲಾ ಸಾರ್ವಜನಿಕ ಕಾರ್ಯಕಲಾಪಗಳೊಳಗೂ ಶ್ರೀಮಂತರ ಕೈಹಿಡಿತ ಸೂಕ್ಷ್ಮವಾಗಿ ಕಾಣಲಿದೆ. ಶ್ರೀಮಂತಿಕೆಯು ತನ್ನ ಎಲ್ಲೆಯನ್ನು ದಾಟಿ ಆಚರಿಸಿದ ಒಂದೆರಡು ದೌರ್ಜನ್ಯಕ್ಕಾಗಿ ಆದವಾನಿ ತಲೆಬಾಗಿ ಅನುಭವಿಸಿದ ಪ್ರಸಂಗವನ್ನು ಎಂದಿಗೂ ಮರೆಯಲಾಗದು.

ಆದವಾನಿ ದೊಡ್ಡ ಪಟ್ಟಣವಲ್ಲವೆಂದೆ. ಅಲ್ಲವಾದರೂ ಸೌಕರ್ಯ ವಿಲಾಸಗಳು ಒಂದರ ಹಿಂದೊಂದು ಸಾವಧಾನದಿಂದ ಬೆಳೆದುಕೊಂಡಿವೆ. ಸುಂದರ ಚಿತ್ರಮಂದಿರ, ನೂತನ ಆಧುನಿಕ ತರದ ಹೋಟೆಲ್, ವಿದ್ಯುದ್ದೀಪ, ನಳ ಎಲ್ಲವೂ ಆಗಿವೆ. ನಳವೇನೋ ಬಂದಿದೆಯಾದರೂ ನೀರು ಮಾತ್ರ ವಿದ್ಯುತ್ತಿನಷ್ಟೇ ಬೆಲೆಯುಳ್ಳದ್ದಾಗಿದೆ. ಹಣದ ವಿಚಾರದಿಂದ ಮೌಲ್ಯವೆನಿಸದಿದ್ದರೂ ಸರಿಯಾಗಿ ದೊರೆಯದ ಅಡಚಣೆಯ ದೃಷ್ಟಿಯಿಂದ ಬೆಲೆಯುಳ್ಳದಾಗಿದೆ. ನೀರು ಸುರಿಯದೆ ಸೋಮಾರಿಯಾಗಿ ನಿಂತ ಈ ನಳವೂ ಏನು ಕಾವ್ಯಮಯ ಸನ್ನಿವೇಶವನ್ನು ಕಲ್ಪಿಸ ಬಲ್ಲುದೆಂದು ಗೊತ್ತೆ? ಮಟ ಮಟ ಮಧ್ಯಾಹ್ನದ ಹೊತ್ತು ನೀರಿಗಾಗಿ ನಳದ ಸುತ್ತು ಝುಪ್ಪಿಸುತ್ತ ನೆರೆದು, ನಾ ಮೊದಲು ನೀ ಮೊದಲು ಎಂದು ಬಾಯ್ಬಿಡುವ ನೀರೆಯರನ್ನು, ನಿರ್ದಿಷ್ಟವಾದ ವೇಳೆಗೆ ಬರಲಿರುವ ನೀರಿಗಾಗಿ ಕಾದಿದ್ದ ನಳವನ್ನು ನೋಡಿ ವಿನೋದಿಯಾದ ಹಾದಿಹೋಕನು ಮಂದಹಾಸ ತೋರುತ್ತ ಮುಂದೆ ನಡೆದರೆ ಯಾವ ಚೆಲುವು ನಗಿಸಿತು ಎಂಬ ಗೆಳೆಯನ ವಿಡಂಬನೆಗೆ ಗುರಿಯಾಗಬಹುದಾದ ಸನ್ನಿವೇಶ.

ಆದವಾನಿ ಸುಧಾರಣೆ, ಸಂಸ್ಕೃತಿ, ಶಿಕ್ಷಣ, ನಾಗರಿಕತೆಗಳಲ್ಲಿ ಮುಂದುವರಿದಿದೆ ಎಂದು ಹೇಳಲಾರೆ. ಆದರೆ ಇಲ್ಲಿ ಶಾಲೆ, ವಾಚನಾಲಯ, ಕ್ಲಬ್, ಸಂಘಗಳು ಇವಾವುವೂ ಇಲ್ಲವೆಂದು ಅರ್ಥ ಮಾಡಹೋಗಬಾರದು.

ಶಾಲೆಗಳುಂಟು; ವಾಚನಾಲಯವಿದೆ. ಕ್ಲಬ್ ಇದೆ. ಸಂಘ ಇದೆ. ನಾಗರಿಕರ ಉಪಯೋಗವಾಗಲಿ, ಎಂದು ಇರಿಸಿದ ಸಾರ್ವಜನಿಕ ರೇಡಿಯೋ ಇದೆ. ಎಲ್ಲವೂ ಪ್ರಗತಿ ತರುವ ಕಾರ್ಯದಲ್ಲಿ ತೊಡಗಿವೆ. ಹೊಸ ಬಗೆಯ ಜೀವನವು ಊರನ್ನು ಆವರಿಸಹತ್ತಿದೆ. ಈ ಪರಿವರ್ತಿತ ಜೀವನದಲ್ಲಿ ಕನ್ನಡವು ನೂತನವಾಗಿ ನುಸುಳಿಕೊಂಡ ಎಚ್ಚರಿಕೆಯಿದೆ. ಆದವಾನಿಯು ಒಮ್ಮೆ ಚನ್ನಾಗಿ ಎಚ್ಚರಗೊಳ್ಳಬೇಕು. ಅದರ ಮುನ್ನಡೆಯು ಆ ಮೇಲೆ ವಿಚಿತ್ರ ವೇಗದಿಂದ ಸಾಗುವಂತಹದು. ಆದರೆ ಆ ಎಚ್ಚರಿಕೆ ಬರಬೇಕಾದರೆ ಮಾತ್ರ ಬಹುಕಾಲ ಹಿಡಿಯುತ್ತದೆ. ಕೇಳ್ಕರ ಅವಾರ್ಡಿನ ಬಳಿಕ ಕಳೆದುಕೊಂಡ ಎಚ್ಚರಿಕೆ ಈಗ ಮತ್ತೆ ಕಾಣಿಸಿಕೊಳ್ಳಹತ್ತಿದೆ ಎಂದು ಹೇಳಿದೆ. ಬಳ್ಳಾರಿ ಜಿಲ್ಲೆಯ ಕನ್ನಡಿಗರ ಪ್ರತಿಭಟನೆಗೆ ವಿರುದ್ಧವಾಗಿ ಜರುಗಿಸಲ್ಪಟ್ಟ ಆಂಧ್ರ ಪ್ರಾಂತೀಯ ಕಾಂಗ್ರೆಸ್ ಸಭೆಯು ಈ ಸಂಧಿಗ್ದ ಕಾಲದ ಕೊನೆಯಾಗಿ ಪರಿಣಮಿಸಿತು. ಅಂದಿನಿಂದ ಕನ್ನಡದ ಸಸಿ ಕೊನರಿತು. ಕರ್ನಾಟಕ ಸಂಘವಾಯಿತು. ಕನ್ನಡ ಶಾಲೆಯಾಯಿತು. ಕನ್ನಡವು ತನ್ನ ಗುರಿಯೇನೆಂದು ಅರಿತುಕೊಂಡಿದೆ. ಗುರಿಯ ಸಾಧನೆಗಾಗಿ ಹೆಣಗಾಡುತ್ತಲಿದೆ. ಕರ್ನಾಟಕ ಸಂಘದ ಕಾರ್ಯದರ್ಶಿಗಳಾದ—ಶ್ರೀ. ಭಿಸಕ್ ರಾಚೋಟಯ್ಯನವರನ್ನೂ ಗೆಳೆಯರ ಗುಂಪಿನ ಕಾರ್ಯಕರ್ತರನ್ನೂ ಕಂಡಾಗ ಆದವಾನಿ ಕನ್ನಡ ಕಿಡಿಗಳ ತಂಡಕ್ಕೆ ಕಾಣಿಕೆ ಸಲ್ಲಿಸಿದೆ, ಎಂದು ನಮ್ಮಲ್ಲಿ ಉತ್ಸಾಹವೇಳುತ್ತದೆ. ಆದವಾನಿಯಲ್ಲಿ ಕನ್ನಡ ಕಿಡಿಗಳು ಎಷ್ಟು ಬೇಗನೇ ತೋರಿಕೊಂಡರು! ಆಂಧ್ರ ಪ್ರಾಂತೀಯ ಸಭೆ ನೆರೆದ ದಿನಗಳಲ್ಲಿ ಈ ಕಿಡಿಗಳ ಬರವನ್ನು ಯಾರು ಊಹಿಸಿದ್ದರು? ಕನ್ನಡಿಗರು ಆಗಕೂಡದೆಂದ ಈ ಸಭೆಯು ಕೊನೆಗೆ ಆಯಿತು. ಆಗ ತುಂಗಭದ್ರೆಯು ತನ್ನ ಕರ್ನಾಟಕತ್ವವನ್ನು ಬಂದ ಆಂಧ್ರ ಜನತೆಗೆ ಎಷ್ಟೋ ವಿಧದಿಂದ ತೋರಿಕೊಟ್ಟಿತು. ಆಂಧ್ರರ ಜಯಘೋಷಣೆಯು ಕನ್ನಡಿಗರ ಜಯಜಯಕಾರದಿಂದ ಹಿಂಬಾಲಿಸುವುದು. ಕನ್ನಡನಾಡಾದ ಇಲ್ಲಿ ಈ ಸಭೆಯನ್ನು ನೆರೆಯಿಸಿದ ಉದ್ದೇಶವೇನು? ಎಂದು ಸ್ವಾಗತ ಸಮಿತಿಯ ಅಧ್ಯಕ್ಷರನ್ನು ಪ್ರಶ್ನಿಸಿದವರು ನೂರು ನೂರು ಮಂದಿ. ಇವರು ಮುಂದಿಟ್ಟ ಒಂದು ಹೆಜ್ಜೆಗೆ ಹಿಂದೆಷ್ಟೋ ಧ್ವನಿಗಳು ಅಸಂತೃಪ್ತಿಯನ್ನು ವ್ಯಕ್ತಗೊಳಿಸಿದುವು. ಈ ಎಚ್ಚೆತ್ತ ಚೇತನವು

ಆದವಾನಿಗೆ ಹರಿದು ಕನ್ನಡ ಚಳುವಳಿಯು ಮೂರ್ತಸ್ವರೂಪವನ್ನು ಹೊಂದಿತ್ತು. ಮತ್ತೆ ಕನ್ನಡ–ಸಸಿ ಕೊನರಿ ಹೆಸರು ತಳೆದಿದೆ.

ಆದವಾನಿ ಜನ ಶೃಂಗಾರ ಪ್ರಿಯರು. ಶೃಂಗಾರಿಗಳಿದ್ದಂತೆ ಆವೇಶಿಸರು, -ಅಭಿಮಾನಿಗಳು. ಇವರ ಅಭಿಮಾನ ಆವೇಶದ ಭರವನ್ನು ಹಿಂದೆ ಆದವಾನಿಯಲ್ಲಿ ನಡೆದು ಹೋದ ಎರಡು ಪ್ರಸಂಗಗಳನ್ನು ಕಣ್ಣಾರೆ ಕಂಡವರು ಸುಲಭವಾಗಿ ಗ್ರಹಿಸಬಲ್ಲರು. ಆ ಒಂದು ಪ್ರಸಂಗವೆಂದರೆ ಆದವಾನಿಯ ಹಿಂದೂಸಮಾಜವು ಗೌರವಿಸಿದ ವ್ಯಕ್ತಿಯನ್ನು ಆಗದವರು ಕೊಲೆಮಾಡಿದಾಗ ಮರುಕ್ಷಣವೇ ಕೊಲೆಗಾರನನ್ನು ಪೋಲೀಸರ ವಶದಿಂದ ಹೊರಗೆಳೆದು ಪ್ರತೀಕಾರ ಮಾಡಲು ಹೊರಟಿದ್ದ ಜನದ ಗುಂಪು. ಇನ್ನೊಂದು ಪ್ರಸಂಗವಿದೆ. ಹಿಂದಿನಕಾಲದ ಗ್ರೀಕ್ ಜನಾಂಗದ ಡೆಲ್‌-ಫಿಕ್ ಓರೆಕಲ್‌ಗೆ ( Delphic oracle ) ಹೋಲಿಸಬಹುದಾದ ಇಲ್ಲಿಯ ಸಂಸ್ಥೆಯೊಂದರ ಯಜಮಾನಿ ಮಡಿದಾಗ ಆಕೆಯ ಸಮಾಧಿ ಮಾಡಲು ನೆರೆದ ಗುಂಪು. ಆದವಾನಿ ಆಕೆಯು ಬಾಳಿದ್ದಾಗ ದೊಡ್ಡಯೋಗಿನಿಯೆಂದು ಸನ್ಮಾನಿಸಿ ಆಕೆಯ ಭವಿಷ್ಯವಾಣಿಯಲ್ಲಿ ಧೃಡ ವಿಶ್ವಾಸವುಳ್ಳದಾಗಿತ್ತು. ಹೀಗೆ ಕೆಲವೊಂದು ಪ್ರಸಂಗಗಳಲ್ಲಿ ಹಿಂದುತ್ವದ ಸ್ಥಿರವಾದ ಭಾವನೆಯು ಆದವಾನಿಯಲ್ಲಿ ಊರಲು ಕಾರಣವಾಯಿತು. ಈ ಭಾವನೆಯು ಸಮಯೋಚಿತ ಮುಖಂಡರೊಬ್ಬರು ಕಾಣಿಸಿಕೊಂಡದ್ದರಿಂದ ಬಲಿದು ಬೆಳೆಯಿತು. ಈ ವ್ಯಕ್ತಿ ಹಿಂದೂ ಜನಾಂಗದ ಪ್ರೇಮಾದರಗಳಿಗೆ ಪಾತ್ರನಾಗಿದ್ದ; ಮರಣಾನಂತರ ಆತನ ಜ್ಞಾಪಕವು ಅಷ್ಟೇ ಪ್ರಿಯವಾಗಿದೆ. ಹಿಂದುಗಳ ಹಕ್ಕು, ಬಾಧ್ಯತೆಗಳ ರಕ್ಷಣೆಗಾಗಿ ಏನನ್ನೂ ತ್ಯಾಗಿಸಲು ಹಿಂದೆಗೆಯದ ವ್ಯಕ್ತಿ ಅದು.

ಕೊನೆಯದಾಗಿ, ಆದವಾನಿಯು ತನ್ನಲ್ಲಿ ಎಚ್ಚರಸಿದ್ದ ಕನ್ನಡದ ಅರಿವು ಗುರಿಯ ಮುಟ್ಟಬೇಕು. ಎಂದಿಗೆ ಆದವಾನಿಯು ಕೇಳ್ಕರ ಅವಾರ್ಡನ್ನು ಮುರಿದ ಕರ್ನಾಟಕ ಕಾಂಗ್ರೆಸ್ ಪ್ರಾಂತದಲ್ಲಿಯೂ ಅಖಂಡ ಕರ್ನಾಟಕದಲ್ಲಿಯೂ ಕೂಡಿಕೊಳ್ಳುವುದೋ ಅಂದಿಗೆ ಅವರ ಗುರಿ ಸಾಧಿಸಿತೆಂದು ತಿಳಿಯುವ.

—ವಿಹಾರಿ

# ಮೈಸೂರು

ಚಿನ್ನದ ನಾಡದು ಮೈಸೂರು, ಗಂಧದ ಬೀಡದು ಮೈಸೂರು ಎಂದು ಕನ್ನಡದ ಕವಿಗಳು ಕವನ ಕಟ್ಟಿದ್ದರೆ ಮೈಸೂರುನಾಡಿನಲ್ಲಿ ಪ್ರವಾಸ ಮಾಡುವಾಗ ವಿದ್ಯುತ್ ಬೆಳಕಿನ ಮಹೋತ್ಸವವನ್ನು ನೋಡುತ್ತೇವೆ. 'ಕ್ರಾಂತಿಪ್ರಿಯರು' ಬೆಂಗಳೂರಿನ ಬಗ್ಗೆ ಬರೆದಾಗ ಮೈಸೂರಿನ ಬಗ್ಗೆ ಸಹ ಎಷ್ಟೋ ಹೇಳಿದಂತಾಯಿತು. "ಬೆಂಗಳೂರು; ಅಲ್ಲಿ ವಿದ್ಯುದ್ದೀಪಗಳು ಚಿಕ್ಕೆಗಳಂತೆ ಅಸಂಖ್ಯಾತವಾಗಿವೆ. ವಿದ್ಯುತ್ ನೀರಿನಷ್ಟು ಸೋವಿಯಾಗಿದೆ, ವಿಪುಲವಾಗಿದೆ. ಸಾರ್ವತ್ರಿಕವಾಗಿದೆ" ಎಂದಿದ್ದಾರೆ. 'ಇದೇನ್ರಿ ಹೀಗೂ ಉಂಟೆ? ಇದು ಉತ್ಪ್ರೇಕ್ಷೆ' ಅಂದವರಿಗೆ ನೀವು ಮೈಸೂರನ್ನು ಹೋಗಿ ನೋಡಿ. ದಸರೆಯ ಸಮಯದಲ್ಲಿ ದರ್ಬಾರು ನಡೆದಿರುವಾಗ ಅರಮನೆಯ ಆವರಣವನ್ನು ಸುತ್ತಿ ಹಾಕಿ ಬನ್ನಿ. ಆ ದೀಪಮಾಲೆ ಆ ಬೆಳಕನ್ನು ನೋಡಿ ಆಗ ಏನೆನ್ನುವಿರಿ? ಆ ದೀಪಾವಳಿಯ ಬುಡದಲ್ಲಿ ತಿರುಗಾಡುವಾಗ ಬಾನಲ್ಲಿಯ ಚಿಕ್ಕೆಗಳು ಎಲ್ಲಿ ಜಾರಿ ಬೀಳುವಾಗ ತಂತಿಗಳಿಗೆ ಸಿಕ್ಕಿಕೊಂಡು ನೇತಾಡುತ್ತಿವೆಯೋ ಎನ್ನಿಸಬಹುದು. ಬಾಲ್‌ಶೇವಿಕ್ ಕ್ರಾಂತಿಯನ್ನು ಸಾಧಿಸಿದ ಲೆನಿನ್ ಇವನು ರಷ್ಯಾದೇಶದ ಪುನರುತ್ಥಾಪನೆಯ ರಚನಾಕ್ರಮಗಳಲ್ಲಿ ವಿದ್ಯುಚ್ಛಕ್ತಿಯ ನಿರ್ಮಾಪನೆಗೆ ಮಹತ್ತಾದ ಸ್ಥಾನವನ್ನು ಕಲ್ಪಿಸಿದನಂತೆ. ಮೈಸೂರಿನ ದಿವಾನಗಿರಿ ಮಾಡಿದವರಲ್ಲಿ ಲೆನಿನ್ನನ ವಿದ್ಯುದೃಷ್ಟಿಯಿದ್ದವರು ಆಗಿಹೋದರಂತೇ ಎಲ್ಲೆಲ್ಲಿಯೂ ವಿದ್ಯುದ್ದೀಪ. ಎಲ್ಲೆಲ್ಲಿಯೂ ಅವುಗಳ ಪ್ರಕಾಶದಲ್ಲಿ ಅದು ಮುಳುಗಿಹೋಗಿದೆ. ಆದರೆ ಬೆಳಕಿನ ಮರೆಯಲ್ಲಿ ಓಣಿ ಮಬ್ಬು ಕತ್ತಲೆಯಲ್ಲಿ ನಡೆಯುವಾಗ ತಲೆಯಲ್ಲಿ ಮತ್ತೊಂದು ವಚನ ಸುಳಿಯುತ್ತದೆ. ಅದು ಮೈಸೂರು ಕಾಂಗ್ರೆಸಿನ ವ್ಯಕ್ತಿಯೊಬ್ಬರು ಮೈಸೂರಿನಲ್ಲಿ ಚಿನ್ನವೂ ಇಲ್ಲ ಗಂಧವೂ ಇಲ್ಲ. "ಹೊಟ್ಟೆಗೆ ಹಿಟ್ಟಿಲ್ಲವಾದರೆ ಜುಟ್ಟಿಗೆ ಹೂವಿದೆ" ಎಂದ ನುಡಿ. ಚಿನ್ನ ಪರದೇಶದ ಕಂಪೆನಿಯದು. ಗಂಧ ಸರಕಾರದ ಸೊತ್ತು. ರೈತನ ಕಳ್ಳು ಕುಡಿದ ಜುಟ್ಟಿಗೆ ಬೇಕಾದ ಹೂವುಗಳು ಮೈಸೂರಿನ ಉಪವನಗಳಲ್ಲಿ ಯಥೇಷ್ಟವಾಗಿ

ದೊರೆಯಲಿವೆ. ಮೈಸೂರು ನೋಟಕ್ಕೆ ವನ, ಉಪವನ, ಉದ್ಯಾನಗಳ ನಗರ ಎಂಬುದೇನೋ ಸತ್ಯವಾದರೂ ಅವು ಬರಿ ತೋಟಗಳಾಗದೆ ಕಲಾ ಪೂರ್ಣವಾದ ತೋಟಗಳು. ನೋಡಿದೆಡೆಯಲ್ಲೆಲ್ಲಾ ಅಚ್ಚ ಹಸುರು; ಮಾಟಾಗಿ ಕತ್ತರಿಸಿದ ಬಳ್ಳಿಯ ಕೊಂಬೆಗಳು, ಆರಿಸಿ ಸೇರಿಸಿ ಬೆಳೆಸಿದ ಹೂವಿನ ಬಣ್ಣಗಳೂ ಕಣ್ಣಿಗೆ ಒಂದು ಹಬ್ಬ. ಹೀಗೆ ಊರಿನ ಒಂದರ್ಧ ತೋಟಗಳಾದರೆ ಇನ್ನೊಂದರ್ಧ ಅರಮನೆಗಳೂ ಸರಕಾರಿ ಕಟ್ಟಡಗಳೂ ಆಗಿವೆ. ಮೈಸೂರು ಬರಿ ಪಟ್ಟಣವಾಗಿ ಉಳಿಯದೆ ಅದು ಅರಮನೆಯಿಂದ ನಗರ ವಾಯಿತು. ಒಂದು ರೀತಿಯಿಂದ ಅರಮನೆಯು ಊರಿನ ಅರ್ಧ ಜನಸಂಖ್ಯೆಗೆ ಜೀವನಾಧಾರವೆಂದು ಹೇಳುವಂತಿದೆ. ರಾಜರ ನಿವಾಸಸ್ಥಾನವಾಗಿ ರಾಜ ಧಾನಿ; ರಾಜಧಾನಿಯಾಗಿ ಮೈಸೂರು ನಗರ. ಮೈಸೂರುನಗರ ರಾಜಧಾನಿ ಯಾದರೂ ಸಂಸ್ಥಾನದಲ್ಲಿ ಪ್ರಾಮುಖ್ಯಸ್ಥಾನ ಬೆಂಗಳೂರಿಗೇನೆ.

ಏನೇ ಇರಲಿ, ಏನೇ ಬಿಡಲಿ, ಮೈಸೂರಿನಲ್ಲಿ ಸೌಂದರ್ಯವಿದೆ, ಸೌಮ್ಯ ಕಳೆಯಿದೆ. ಊರಿನ ಮಂದಿರ ಮಹಲುಗಳ ಬೆನ್ನ ಹಿಂದೆ ನಿಸರ್ಗವು ಆಕಾಶದ ಪರದೆಯ ಮೇಲೆ ರಚಿಸಿದ ಬೂದು ಬಣ್ಣದ ಬೆಟ್ಟಗಳು ಎದ್ದುನಿಂತು ಉಂಟಾದ ನೋಟವು ಎಂತಹ ಹೃದಯವನ್ನೂ ಮುಗ್ಧ ಗೊಳಿಸುವಂತಿದೆ. ಅಚ್ಚುಕಟ್ಟಾದ ನಿಲ್ದಾಣದ ಆವರಣವನ್ನು ದಾಟಿ ಹೋಗುವಾಗ ವಿಶಾಲ ಬೀದಿಯ ಬದಿಗೆ ಬೆಳೆದ ಮಹಲುಗಳಂಥ ಮಂದಿರ ಗಳೂ, ಹಸುರಿಲ್ಲದಿರದ ವಿಶಾಲ ಕಂಪೌಂಡುಗಳೂ, ಧೂಳುಧೂಸರಿಲ್ಲದ ಕಾಲ ರಸ್ತೆಯ ಮೇಲೆ ಸಾಲಾಗಿ ನಿಂತ ತಂತಿ ಇಲ್ಲದ ಬೀಡಿನ ದೀಪ ಸ್ತಂಭಗಳೂ ಇವುಗಳನ್ನು ನೋಡುತ್ತ ತಣಿಯುತ್ತ ಮೈಸೂರು ರೇಲ್ವೆ ಕೇಂದ್ರ ಕಚೇರಿ, ಕೃಷ್ಣರಾಜೇಂದ್ರ ಟೆಕ್ನಿಕಲ್ ಇನ್‌ಸ್ಟಿಟ್ಯೂಟ್, ಕಣ್ಣಾ ಆಸ್ಪತ್ರೆ ಇತ್ಯಾದಿಗಳನ್ನು ಹಾದುಹೋಗುವೆವು. ಆದರೆ ಆ ಗಾಳಿಯಲ್ಲಿ ಮನಸು ತುಂಬುವ ಉಲ್ಲಾಸ ಎಲ್ಲಿಂದ ಬಂದಿತೋ? ಇಂತಹ ಮೈಸೂ ರಿನಲ್ಲಿ ಏನಿಲ್ಲ? ಎಲ್ಲವೂ ಇದೆ. ಒಮ್ಮೆ ಏನೂ ಇಲ್ಲದಿದ್ದರೂ ಮಹಾರಾಜ ರಿದ್ದಾರೆ ಸಾಕು! ಮೈಸೂರು ಜನರಿಗೆ ಅವರೆ ಉಸಿರು. ಮೈಸೂರಿನ ಜನರ ಮಾತು ಮಹಾರಾಜರ ಗುಣಗಾನ, ವೈಭವ ವರ್ಣನೆ, ಮಹಿ ಮೆಯ ಹಿಗ್ಗು. ಆಳಿಕೆಯು ಪ್ರಜೆಗಳಿಂದ ಮತ್ತೇನನ್ನು ಅಪೇಕ್ಷಿಸೀತು?

ಎಲ್ಲಕ್ಕೂ ಮಿಗಿಲಾಗಿ ಆಳುವವರಲ್ಲಿ ಅಪಾರ ರಾಜಭಕ್ತಿ. ಆದರೆ ಮೈಸೂರು ದಸರೆಯ ಮಹೋತ್ಸವ, ದರ್ಬಾರು, ಮೆರವಣಿಗೆ ಜನ ಸ್ತೋಮ, ವರ್ಧಂತಿ ವೈಭವಗಳ ಮರುಳನ್ನು ತೂರಿದ ಬಳಿಕತಾನೇ ಜನಸಾಮಾನ್ಯರ ವಿಚಾರವನ್ನು ಕೆಣಕಬಲ್ಲುದು. ಕಾಂಗ್ರೆಸ್ಸಿನ ಪ್ರತಿನಿಧಿ ಗಳು ಕೌನ್ಸಿಲ್ ಸಭೆಗಳಿಂದ ಹೊರಟುಬಂದರೆ ಈ ಜಾತ್ರೆಯಲ್ಲಿ ಯಾರು ಕೇಳಿಯಾರು ?

ಸರಕಾರದಿಂದ ಸ್ಥಾಪಿತವಾದ ಒಂದೆರಡು ಫ್ಯಾಕ್ಟರಿಗಳ ಹೊರತು ಮೈಸೂರು ಕೈಗಾರಿಕೆಯ ಸ್ಥಳವಲ್ಲ. ಹಾಗೆ ನೋಡಿದರೆ ವ್ಯಾಪಾರ ಸ್ಥಳವೂ ಅಲ್ಲ. ಆದರೆ ಊರ ಮುಖ್ಯ ವ್ಯಾಪಾರವು ದಿನ ಬೆಳಗಿದರೆ ಬರಹೋಗುವ ಪ್ರವಾಸಿಗಳ ಮೇಲೆ ಅವಲಂಬಿಸಿ ನಿಂತಿದೆ. ಹೋಟೆಲ್, ಟ್ಯಾಕ್ಸಿ, ಟಾಂಗಾ, ಇವುಗಳ ಮುಖ ಸರ್ವದಾ ಗಿರಾಕಿಗಳಿಗಾಗಿ ನಿಲ್ದಾಣದ ದಿಸೆ ನೋಡುತ್ತಿರಬೇಕು. ಆದರೆ ದಸರೆ, ವರ್ಧಂತಿಗಳ ಸಮಯದಲ್ಲಿ ಪ್ರವಾಸಿಗಳ ನೆರೆ ಬಂದಾಗ ಇವರ ಮುಖ ಅದಾವ ಕಡೆಗೆ ತಿರುಗುತ್ತದೆ ಎಂದು ಹೇಳುವದೆ ಕಷ್ಟ. ಯುದ್ಧವೊದಗಿದಾಗ ದೇಶದಲ್ಲಿ ಏಕಾಏಕಿ ಬೆಲೆ ಏರುವಂತೆ ಮೈಸೂರಿನಲ್ಲಿ ಆಗ ಯಾವುದಕ್ಕೂ ವಿಪರೀತ ಬೆಲೆ. ಒಂದು ರೀತಿಯಿಂದ ಮೈಸೂರು ಪ್ರವಾಸಿಗಳನ್ನು ತನ್ನೆಡೆಗೆ ಸೆಳೆಯುವ ಹೊಂಚು ಹಾಕಿಕೊಂಡೇ ಇದೆ. ಮೈಸೂರಿನ ಈ ಶ್ರದ್ಧೆ ರೇಲ್ವೆಗೆ ಆದಾಯ, ಊರ ವ್ಯಾಪಾರಕ್ಕೆ ಅನುಕೂಲ. ಇಲ್ಲಿ ಎಷ್ಟು ರಂಜಕ ನೋಟಗಳು ! ಎಷ್ಟು ವಿಹಾರ ಸ್ಥಾನಗಳು ! ಹತ್ತಿರವೆ ಪಾಶ್ಚಾತ್ಯ ಪ್ರವಾಸಿಗಳನ್ನು ಸಹ ಆನಂದದಿಂದ ಬೆರಗುಗೊಳಿಸುವ ಬೃಂದಾವನವನ್ನು ನಿರ್ಮಿಸಿದೆ. ಇದೊಂದು ಯಂತ್ರಜ್ಞ ಕೌಶಲ್ಯವು. ರಂಗು, ಬೆಳಕು, ಹೂಬಳ್ಳಿ, ನೀರು ಇವುಗಳ ಒಂದ ರೊಡನೊಂದನ್ನು ಚಮತ್ಕಾರವಾಗಿ ಜೋಡಿಸುವ ಕಲೆಯಿಂದ ಚೆಲುವಾಂತ ಕೃತಿ. ಈ ನಂದನವನದ ಬೆನ್ನಿಗೆ ಕೃಷ್ಣರಾಜಸಾಗರ. ಈ ನಂದನವನಕ್ಕೆ ಹಾದಿ ಆದರ ಆಣೆಕಟ್ಟಿನ ಮೇಲೆ. ಹಗಲ ಬೆಳಕಿನಲ್ಲೊಂದು ವಿಧವಾಗಿ, ರಾತ್ರಿ ಕಗ್ಗತ್ತಲಿನಲ್ಲೊಂದು ವಿಧವಾಗಿ ಮೋಹಗೊಳಿಸುವ ಜಲಯಂತ್ರದ ಎಡೆ ನೀರೆರೆದ ಹುಲ್ಲು ಹಾಸಿನ ಮೇಲೆ ಕುಳಿತು ಇದು ಒಂದು ಜಗತ್ತಿನಲ್ಲಿ ಹೊಸ ಮಾದರಿಯ ತೋಟವೆಂದು ಅಂದುಕೊಳ್ಳುತ್ತೇವೆ. ಒಂದು ರೀತಿಯಿಂದ

ವಿಚಾರಿಸಿವರೆ ಮೈಸೂರಿನಲ್ಲಿ ರಾತ್ರಿಯಲ್ಲಿ ಸುತ್ತಿದರೆ ಸೊಗಸು ಅನ್ನಿಸುತ್ತೆ. ಒಂದು ರಮ್ಯ ತಾಣದಿಂದ ಮತ್ತೊಂದು ರಮ್ಯ ತಾಣಕ್ಕೆ ಬೃಂದಾವನದಿಂದ ಚಾಮುಂಡಿ ಬೆಟ್ಟದ ತುದಿಯ ವರೆಗೆ ಟಾರ್ ರಸ್ತೆಯ ಮೇಲೆ ಮಿಂಚೀಳುವ ತಿಳಿ ಪ್ರಕಾಶದಲ್ಲಿ ಉಲ್ಲಾಸಕರ ಸುತ್ತು ಆಗುವದು. ಟ್ಯಾಕ್ಸಿಯು ಎಷ್ಟೋ ಎಡೆಗಳಲ್ಲಿ ಪಾರ್ಶ್ವದ ಲತಾಮಂಟಪಗಳ, ಕುಂಜುಗಳ ಬಳಸಿ ಹಂದರಗಳ ಕಮಾನುಗಳ ಬುಡದಲ್ಲಿ ಸದ್ದಿಲ್ಲದೆ ತೂಗುತ್ತ ತೇಲುತ್ತ ಚಲನೆಯು ಮುಂದರಿಸುವುದು. ಚಾಮುಂಡಿ ಬೆಟ್ಟದ ನೆತ್ತಿಯ ಮೇಲೆ ನಿಂತು ಕೆಳಗಿನ ದೀಪಮಾಲೆ ಕುಂಜಗಳ ಹಸುರಿನ ನಡುವಿದ್ದ ದೀಪಗುಚ್ಛ, ಅರಮನೆ, ಲಲಿತ ಮಹಾಲಿನ ಸುತ್ತಲಿನ ವಿಸ್ತರಣೆಯಲ್ಲಿ ಬಿಡಿಬಿಡಿಯಾಗಿ ನಿಂತಿದ್ದ ವಿದ್ಯುದ್ದೀಪಗಳನ್ನು ನೋಡುತ್ತ ರಸನಿಮಿಷಗಳನ್ನು ಕಳೆಯುವಂತಿದೆ. ಆದರೆ ಕೆಳಗಿದ್ದು ಅರಮನೆಯ ವಿಶಾಲ ಹುಲ್ಲಿನ ಬಯಲಿನ ಸುಣ್ಣುಪಿನ ಮೇಲೆ ನಿಂತು ನೋಡಲು ಮೈಸೂರಿನ ಸುಂದರ ಮಂದಿರಗಳಿಗೆ ಹಿನ್ನೆಲೆಯಾಗಿ ಎದ್ದ ಈ ಬೂದುಬಣ್ಣದ ಬೆಟ್ಟ ಅಷ್ಟೇ ರಮಣೀಯವಾಗಿ ಕಾಣಬೇಕೆ? ಹೀಗೆ ಎಲ್ಲಿದ್ದು ನೋಡಲಿ ;— ಎಲ್ಲಿ ಹೋಗಿ ನೋಡಲಿ, ಸುಂದರ ನೋಟವೇ ಕಣ್ಣಿಗೆ ಬೀಳುವುದು. ಹೀಗೆ ಬರೆಯುತ್ತ ಎಷ್ಟನ್ನೋ ವರ್ಣಿಸಬಸುದು. ಆದರೆ ಕೊಳೆಯಿಲ್ಲದ ಊರು ಉಂಟೆ? ಅಶೋಕರೋಡಿನ ಒಂದು ಕೊನೆ ಅರಮನೆಯಿಂದ ಮತ್ತೊಂದು ಕೊನೆಯ ರೋಮನ್ ಕ್ಯಾಥೋಲಿಕ್ ಕ್ರಿಸ್ತ ಮಂದಿರದ ಚೆಲುವಿನ ಗೋಪುರದ ಮಧ್ಯ ಓಣಿಗಳಲ್ಲಿ ಸಂದುಗಳ ಡೊಂಕಿನಲ್ಲಿ ಎಷ್ಟು ಕೊಳೆಯಿಲ್ಲ! ಆದರೆ ಮೈಸೂರಲ್ಲಿ ಕೊಳೆಗಿಂತಲೂ ಸೌಂದರ್ಯವೇ ಹೆಚ್ಚಾಗಿ ಕಾಣಲಿದೆ. ಮೈಸೂರುನಗರದಲ್ಲಿ ಯಂತ್ರ ಯುಗದ ಹಾಗೆ ಕೊಟ್ಟಿಗೆಗಳು ಇಲ್ಲ.

ಹೀಗೆ ಚೆಲುವಿನ ಕುಂಜಗಳ ಸೆರಗಿನಲ್ಲಿ ಬಿದ್ದ ಮೈಸೂರು ಬೇರೆ ಬಗೆಗಳಿಂದ ತನ್ನ ಕೀರ್ತಿಲತೆಯನ್ನು ಹೊರನಾಡಿಗೆ ಹಬ್ಬಿಸಿಕೊಂಡಿದೆ. ಇನ್ನೊಂದು ದೃಷ್ಟಿಯಿಂದ ಅದು ಮೈಸೂರಾಗಿ ಹೆಸರುವಾಸಿಯಾಗಿದೇ ಹೊರತು ಕನ್ನಡ ಕೇಂದ್ರವೆಂದೆನಿಸಿ ಹೆಸರಾಗಲಿಲ್ಲ. ಮಹಾರಾಷ್ಟ್ರದ ಪುಣೆಯಾಗಿ ಆಗಲಿ, ಬಂಗಾಲದ ಕಲಕತ್ತವಾಗಿಯಾಗಲಿ ಆಗದಾಯಿತು. ಇಲ್ಲಿ ರಾಜಾಶ್ರಯದಲ್ಲಿ ಪೋಷಣವಾಗಿರತಕ್ಕ ಕವಿ, ಗಾಯಕ, ಗಮಕಿ, ಪಂಡಿತ, ಕಲೆಗಾರ ವೃಂದವೂ ಇರುತ್ತಾ ಈ ಆಶ್ರಯದ ಚಾಮರದಲ್ಲಿ ಬೆಳೆಯಬೇಕಾದ

ಕನ್ನಡತ್ವದ ನಾನಾ ಮುಖವು ಬೆಳೆಯಬೇಕಾದಷ್ಟು ಬೆಳೆಯದಿದೆ. ಆಸ್ಥಾನದ ಗಾಯಕರು ತುಂಬಾ ಸಂಗೀತ ವಿದ್ವಾಂಸರು. ಸುಶ್ರಾವ್ಯವೋ ಅಲ್ಲವೋ ಆಗಲಿ, ಶಾಸ್ತ್ರೀಯ ಸಂಗೀತವನ್ನು ಹಾಡುತ್ತಾರೆ. ಕನ್ನಡದ ಕೃತಿಗಳನ್ನು ಹಾಡದೆ ಇರುವಾಗ ಸಂಗೀತ ಗೋಷ್ಠಿಗಳಿಗೇನು ಕೊರತೆಯಿಲ್ಲ. ಮೈಸೂರು ಯಂತ್ರಗಳ ಗಾಲಿಯ ಚಲನೆಯಿಂದಲೋ, ತಕ್ಕಡಿಯ ತುಲನೆಯಿಂದಲೋ ಬೆಳೆದ ನಗರವಲ್ಲ ಎಂದೆ. ಅಂದಮೇಲೆ ಅಚ್ಚುಕೂಟಗಳು ಹೇಗೆ ಬಹಳ ಇದ್ದಾವು? ಧಾರವಾಡ, ಬೆಂಗಳೂರು, ಎಲ್ಲಿಯಂತೆ ಕನ್ನಡ ಪುಸ್ತಕ ಬರೆದು ಸಂತೋಷಗೊಳುವವರು ಬಹಳಷ್ಟು ಜನರಿದ್ದರೆ ತಾನೆ ಅಚ್ಚುಕೂಟಗಳ ಕೆಲಸ ! ಹಾಗೇ ಓದುವವರು ಇದ್ದರೆ ತಾನೆ ಪ್ರಕಟನಾಲಯಗಳೂ, ಪುಸ್ತಕ ಭಾಂಡಾರಗಳೂ, ಇರಲಿಕ್ಕೆ. ಮೈಸೂರು ವಿಶ್ವವಿದ್ಯಾಲಯವಿದ್ದ ಮರ್ಯಾದೆಗಾಗಿ ಅಲ್ಲಿ ಹಲವು ಕನ್ನಡ ಪುಸ್ತಕಗಳು ಪ್ರಕಾಶ ಕಾಣುವ ಸೌಭಾಗ್ಯವೊದಗಿತು. ಮೈಸೂರ ಬಗ್ಗೆ ಕನ್ನಡ ಶಿಕ್ಷಣದ ಶಿಖಾಯತಿ ಏನೂ ಇಲ್ಲ. ಅಲ್ಲಿ ಶಾಲೆ, ಕಾಲೇಜು, ವಿಶ್ವವಿದ್ಯಾಲಯ, ಎಲ್ಲವೂ ಇವೆ. ಕನ್ನಡ ವನ್ನು ಕಲಿಯಲು ಎಲ್ಲ ಸೌಕರ್ಯವಿದೆ. ಹೈದರಾಬಾದಿನಲ್ಲಿಯ ಉರ್ದುವಿನ ಸ್ಥಾನವನ್ನು ಮೈಸೂರಲ್ಲಿ ಕನ್ನಡವು ಹೊಂದಲು ಮಾತ್ರ ಇನ್ನೂ ಬಹು ದೂರದ ದಾರಿ. ಆಸೆ ದೂರವೇ ಎಂದಾಗ್ಯೂ ಆಗದ ಆಸೆ ಎನ್ನಲಾರೆ. ಇದೇ ಒಂದು ಸಮಾಧಾನ. ಊರಿನ ಮಾತು ಕನ್ನಡವೇ ಆದರೂ ತೆಲುಗು ನುಡಿ ಕಿವಿಗೆ ಬೀಳದೆ ಇಲ್ಲ. ತೆಲುಗು ಬೋರ್ಡುಗಳು ಸಾಕಷ್ಟು ಇವೆ. ವೈಶ್ಯ ಛತ್ರದಲ್ಲಿಯಾಗಲಿ, ಅಥವಾ ವೈಶ್ಯರ ಮನೆಯಲ್ಲಾಗಲಿ ಬಿಡಾರ ಹಾಕಿ ಒಂದು ಇಡೀ ದಿನವನ್ನು ಅಲ್ಲಿಯೇ ಇದ್ದು ಕಳೆದರೆ ಮೈಸೂರನ್ನು ನಾವು ಯಾವ ಇಂದ್ರಜಾಲದಿಂದ ಬಿಟ್ಟುಬಂದು ಆಂಧ್ರ ದೇಶದಲ್ಲಿ ಸ್ಥಾಪಿತರಾಗಿ ದ್ದೇವೋ ಎನ್ನುವ ಸಂಶಯಪಿಶಾಚಿ ನಮ್ಮನ್ನು ಬಡಿದುಕೊಳ್ಳಲು ಅಡ್ಡಿ ಇಲ್ಲ. ಮರುಗಳಿಗೆಯಲ್ಲಿಯೇ 'ರಾಂಡ, ಪೋಂಡ, ಕೂರ್ಚೊಂಡ' ಎಂಬ ಅಪಭ್ರಂಶ ಶಬ್ದ, ಅವುಗಳ ಉಚ್ಚಾರಣೆಯು ನಮ್ಮನ್ನು ಇದು ಮೈಸೂರ ತೆಲುಗು, ನಾವು ಮೈಸೂರು ಬಿಟ್ಟು ಹೋಗಿಲ್ಲೆಂದು ಮನವರಿಕೆಯಾಗುವದು. ಇಲ್ಲಿ ಮೈಸೂರು ವೈಶ್ಯ ಯುವಕ ಸಮ್ಮೇಲನ, ಆರ್ಯ ವೈಶ್ಯ ಮಹಾಜನ ಗಳ ಸಭೆಯಾಗುವದುಂಟು. ಮೊನ್ನೆ ನಡೆದ ಯುವಕ ಸಂಮೇಲನದ ಠರಾ

ವ್ವೊಂದರಲ್ಲಿ ವೈಶ್ಯ ಮಹಾಜನವು ತೆಲುಗು ಮತ್ತು ಹಿಂದೀ ಭಾಷೆಗಳನ್ನು ಕಲಿಯಲು ಹೆಚ್ಚು ಹೆಚ್ಚು ಗಮನ ಕೊಡಬೇಕೆಂದು ತೀರ್ಮಾನವಾಯಿ ತಂತೆ. ಮೈಸೂರಿನಲ್ಲಿ ತೆಲುಗು ಬೋರ್ಡುಗಳನ್ನು ಪ್ರೋತ್ಸಾಹಿಸುವ ಗುಂಪು ಇದು. ಹೋಗಲಿ—ಈ ತೆಲುಗು ಬೋರ್ಡುಗಳ ಚಿಂತೆಯಿಂದ ಬಿಡುಗಡೆ ಯಾಗುವ ಎಂದು ಮುಂದೆ ಹೋದರೆ ಸಿನೀಮಾ ಮಂದಿರಗಳು ನಮ್ಮ ಇದಿರು ನಿಂತು ತೆಲುಗಿನದಾಗಲಿ, ಅರವದ್ದಾಗಲಿ, ಚಿತ್ರಪಟದ ಜಾಹೀರಾತು ಗಳನ್ನು ತೂಗು ಹಾಕಿಕೊಂಡು ಅಣಕಿಸುತ್ತವೆ. ಮೈಸೂರು ತೆಲುಗು, ಅರವ ಚಿತ್ರಗಳ ಪ್ರದರ್ಶನ ಮಾತ್ರದಿಂದಲೂ ತೃಪ್ತಿಗೊಂಡಂತಿಲ್ಲ. ಒಂದೆ ರಡು ಅರವ ಚಿತ್ರಗಳನ್ನು ಸಹ ತಯಾರಿಸುವುದರಲ್ಲಿ ಕೈಹಾಕಿತ್ತು. ಇಷ್ಟೆಲ್ಲಾ ಕಂಡು ಕೇಳಿದ ಬಳಿಕ ಮುಖವು ಮೈಸೂರು ಆಕಾಶವಾಣಿಯ ಕಡೆಗೆ ಹೊರಳಿದರೆ 'ನನು ಬ್ರೈಚೀವಾರವರು' ಎಂದು ಸಂಗೀತಾಲಾಪನೆ ಕೇಳಿ ಪೌರಾಣಿಕ ನಾಟಕದಲ್ಲಿ ಆಕಾಶವಾಣಿಯನ್ನು ಕೇಳಿ ಮೂರ್ಛೆ ಹೋಗುವ ಭೂಮಿಕೆಯಂತೆ ನಮ್ಮ ಸ್ಥಿತಿಯಾದರೆ ತಪ್ಪಿನ ಹೊಣೆ ನಮ್ಮದಲ್ಲ. ಹೀಗೆ ಮೈಸೂರನ್ನು ಕಂಡು ಕಣ್ಣು ಹಿಗ್ಗಿದರೂ ಮನಸ್ಸು ಕುಗ್ಗುವ ಸ್ಥಿತಿ ಇದೆ. ಕನ್ನಡ ಸಾಮ್ರಾಜ್ಯದ ಕಿರೀಟ ವಿಜಯನಗರದ ವಿನಾಶದಿಂದ ತಪ್ಪಿಸಿಕೊಂಡು ಬಂದು ಮೈಸೂರಲ್ಲಿ ರಾಜ್ಯಕಟ್ಟಿತು. ಅವರ ಪೋಷಣೆಯಲ್ಲಿ ಬೆಳೆದ ಎಷ್ಟೋ ಸಾಹಿತ್ಯ ನಮಗೆ ಹಿರಿಯರು ಬಿಟ್ಟುಹೋದ ಗಂಟಿನಲ್ಲಿ ಸೇರಿದೆ. ಪಂಡಿತ ಪರಂಪರೆಯು ರಾಜಾಸ್ಥಾನದಲ್ಲಿ ಅವ್ಯಾಹತವಾಗಿ ಹರಿದು ಬಂದಿದೆ. ಆಧು ನಿಕ ಸಾಹಿತ್ಯಸೃಷ್ಟಿಯಲ್ಲಿ ಇವರ ಸೃಷ್ಟಿ ಏನು ಎಂದಾಗ ನಾವು ಬಾಯಿ ಬಿಡುವ ಪ್ರಸಂಗ. ಆದರೆ ಕ್ರಾಂತಿಯುಗದಲ್ಲಿ ಅರಮನೆಯ ಸಾಹಿತ್ಯವಾದರೂ ಪ್ರಚಾರವಾದೀತೆ ಎಂದು ಪ್ರಶ್ನೆಯೂ ಇದೆ.

ಮೈಸೂರಿನ ಕನ್ನಡದ ಬಗ್ಗೆ ಏನೋನೋ ಹೇಳಿಬಿಟ್ಟೆ. ಇದು ಹೇಳಿದ್ದು. ಆದರೆ ನನಗೆ ವಿಚಿತ್ರ ತೋರಿದ್ದು ಹೇಳಲಾರದ್ದು. ಇಲ್ಲಿ ಕನ್ನಡವು ಸಸಿಯಾಗಿಯೇ ಉಳಿದಿದೆ ಎಂದರೆ ಅದು ಕಮರಿಹೋಗಿಲ್ಲ, ದೊಡ್ಡ ವಿಶ್ವ ವಿದ್ಯಾಲಯವೇ ಇಲ್ಲಿದೆ. ಕನ್ನಡಕ್ಕೂ ಇಲ್ಲಿ ದೊಡ್ಡ ಸ್ಥಾನವಿದೆ. ಆದರೆ ಅದು ಕರ್ನಾಟಕದ ವಿಶ್ವವಿದ್ಯಾಲಯವಲ್ಲ. ಕನ್ನಡಕ್ಕೆ ರಾಜಾಶ್ರಯವಿದೆ, ಕನ್ನಡ ರಾಜಭಾಷೆಯಾಗಿ ಸರ್ವಸಾಮಾನ್ಯವಾಗಿದೆ ಎಂದರೆ ನೆರೆಯ ಭಾಷೆಯ

ಹಾವಳಿ ತಪ್ಪಿಲ್ಲ. ಕನ್ನಡ ನುಡಿಯ ಅಭಿಮಾನವಿದೆ ಎಂದರೆ ಹಲವು ಸಾಹಿತ್ಯ ಪ್ರಪಂಚದ ಜೀವಿಗಳ ಹೊರತು ಕನ್ನಡದ ಬಗ್ಗೆ ಲಕ್ಷ್ಯ ಕೊಡುವ ವ್ಯಕ್ತಿ ಇದ್ದಹಾಗೆ ಅರಿಯೆ. ಕನ್ನಡಿಗರ ರಾಜಧಾನಿಯೆಂದರೆ ಸಾಹಿತ್ಯ ಪರಿಷತ್ತು ಆದದ್ದು ಒಮ್ಮೆ ಮಾತ್ರ. ಆದರೆ ಆಗ ಮೈಸೂರು ಪರಿಷತ್ತಿನ ಅಧ್ಯಕ್ಷರಿಗೆ ಇತ್ತ ಸ್ವಾಗತವು ಮಾತ್ರ ರಾಜಧಾನಿಯ ವೈಭವ ಗಾಂಭೀರ್ಯ ಗಳಿಗೊಂದೇ ಸಾಧ್ಯ. ಮುಂದೆ ಅಧ್ಯಕ್ಷ ಪದವಿಯ ಇಂಥ ಸ್ವಾಗತವನ್ನು ಬಳ್ಳಾರಿಯ ಪರಿಷತ್ತಿನ ವರೆಗೂ ಕಾಯಬೇಕಾಯಿತು. ಹೀಗೆ ಮೈಸೂರಿನ ಕನ್ನಡದ ಬಗ್ಗೆ ಏನು ಹೇಳಿದರೂ ಸ್ವಲ್ಪವೇ.

ಮೈಸೂರ ಬಗ್ಗೆ ಬರೆದು ದಸರೆ ಪರ್ವಣಿಗಳ ಬಗ್ಗೆ ಹೇಳದಿರುವುದೇ ? ಆಗ ಮೈಸೂರು ದೀಪಮಾಲೆಗಳ ಸಾಲಿನಲ್ಲಿ ಮುಳುಗಿರುತ್ತದೆ. ಅರಮನೆಯು ವಿದ್ಯುದ್ದೀಪಗಳಿಂದ ಕಟ್ಟಿದ ಕಟ್ಟಡವೋ ಎನ್ನಿಸುತ್ತಿದೆ. ದರ್ಬಾರು, ಮೆರ ವಣಿಗೆಯನ್ನು ನೋಡಿದಾಗ ರಾಜವೈಭವಗಳನ್ನು ಹಿಂದಿನ ಕವಿಗಳು ವರ್ಣಿಸಿದ ಕಾರಣ ತಿಳಿದೀತು. ಈ ವೈಭವದ ನೆನಪು ನೋಡಿ ಹೋದವರು ಅದನ್ನು ಮರೆಯಬಹುದಾದರೂ ಮೈಸೂರಿನವರು ಎಂದಿಗೆ ಮರೆಯ ಲುಂಟು ? ಅದು ಅಲ್ಲಿಯ ಮಾತಿಗೆ ವಸ್ತು, ಅಭಿಮಾನಕ್ಕೆ ಕಾರಣ. ಯಾವುದು ಏನೇ ಇರಲಿ, ಒಂದು ಮಾತು ಮಾತ್ರ ಸತ್ಯ. ಮೈಸೂರು ಚೆಲುವು ! ಚೆಲುವೇ ಮೈಸೂರು ! ಮೈಸೂರು ಎಲ್ಲಿದೆ ಎಂದ ಪ್ರಶ್ನೆಗೆ ಅಲಂಕಾ ರಿಕವಾಗಿ ಚೆಲುವಿನಲ್ಲಿ ಅನ್ನಬಹುದು. ರಾತ್ರಿ ಚೆಲುವಾಗಿ ಕಂಡು ಹಗಲು ಅಸಹ್ಯವಾಗಿ ಕಾಣಬರುವ ನಗರಗಳಂತೆ ಮೈಸೂರಲ್ಲ. ರಾತ್ರಿ ಎಷ್ಟು ಚೆಲುವೋ ಹಗಲೂ ಅಷ್ಟೇ ಚೆಲುವು. ನಗರವನ್ನು ದಾಟಿ ರೈಲಿನಲ್ಲಿ ಸಾಗಿ ಬಹುದೂರ ಬಂದರೂ ಚಾಮುಂಡೀ ಬೆಟ್ಟದ ನೆತ್ತಿಯ ಮೇಲಿನ ದೀಪಗಳ ರೇಖೆ ಹೆಂಗುರುಳು ಕಪ್ಪಿನಲ್ಲಿ ಬೈತಲೆಯಂತೆ ಚೆಲುವಾಗಿ ಕಾಣಿಸುವದು. ಆದರೆ ಆ ತೋಟಗಳೋ ಬೆಂಗಳೂರು ದಾಟುವವರೆಗೂ ಕಣ್ಣಿಂದ ಮರೆ ಯಾಗವು. ಬಯಲು ನಾಡಿನಲ್ಲಿ ಇರುತ್ತ ನೆನೆದರೂ ಒಂದುಕ್ಷಣ ಮೈಸೂರಿನ ತೋಟಗಳಲ್ಲಿ ವಿಹರಿಸುವಂತೆ ಭಾಸವಾಗುವದು.

—ವಿಹಾರಿ

# ಬೆಂಗಳೂರು

ಮೈಸೂರಂತೆ ಬೆಂಗಳೂರನ್ನೂ ಗಂಧದ ಗುಡಿ, ವೀಣೆಯ ಬೆಡಗು, ಸಂಗೀತ ಕಛೇರಿಗಳ ಚಾವಡಿ, ಸಾಹಿತಿಗಳ ಸುಖಮಂದಿರ ಎಂದು ಮುಂತಾಗಿ ವರ್ಣಿಸಬಹುದು. ಆದರೆ ಅದು ಕನ್ನಡದ ಕಣ್ಣೂ ಅಹುದೆಂದು ಹೇಳಿದರೆ ನಮ್ಮ ಮೂಗನ್ನು ಕೊಯ್ದು ಕೈಯ್ಯಲ್ಲಿ ಕೊಡುವ ಮಹನೀಯರುಂಟು! ಬೆಂಗಳೂರಿನಲ್ಲಿ ಸಾಹಿತ್ಯ ಪರಿಷತ್ತಿನ ಮಂದಿರವೇನೋ ಇದೆ ; ಕಾಲೇಜಿನಲ್ಲಿ ಕನ್ನಡವನ್ನು ಕಲಿಸುವ ಏರ್ಪಾಡು ಇದೆ. ಕನ್ನಡ ಶಾಲೆಗಳಿವೆ, ಬೋರ್ಡು ಗಳಿವೆ, ಆದರೆ ಸಂಗೀತವನ್ನು ಕೇಳಹೋದರೆ– ಅಲ್ಲಿ ತ್ಯಾಗರಾಜರ ಬೆನ್ನು ಹತ್ತಿ ತೆಲಗು ಬಂದು ನಮ್ಮೆದುರು ಕೂಡುತ್ತದೆ. ಸಿನಿಮಾ ಗೃಹಗಳಿಗೆ ಹೋದರೆ, —ಅಲ್ಲಿ ತೆಲುಗು, ಹಿಂದಿ, ಮರಾಠಿ, ಇಂಗ್ಲೀಷು,— ಸಾಧಾರಣ ವಾಗಿ ಕನ್ನಡವನ್ನು ಬಿಟ್ಟು ಉಳಿದ ಭಾಷೆಗಳಲ್ಲೆಲ್ಲ ಸಿನಿಮಾ ಸಂಭಾಷಣೆಯೂ ಕಥಾಪ್ರವಾಹವೂ ನಡೆಯುತ್ತಿರುತ್ತವೆ. ಪಂಡಿಸ ಪೇಟೆಗೆ ಹೋಗಿ ನಿಂತು, "ಅಹಾ! ಕರ್ನಾಟಕವೆ! ಎಷ್ಟು ಮುಂದುವರಿದಿದ್ದೀಯೆ!" ಎಂದು ನಾವು ಉದ್ಗಾರ ತೆಗೆದರೆ ಅಲ್ಲಿ ನಮ್ಮ ಕಿವಿ ಹಿಂಡಿ ಹೊರಗೆ ಕಳಿಸುವವರಿದ್ದಾರೆ. ತಮಿಳರು, ಪಾಶ್ಚಿಮಾತ್ಯರು, ಪಾರ್ಶಿಗಳು, ಗುಜ್ಜರು, ಮಾರವಾಡಿಗಳು, ಜೂಗಳು, ಈ ಜನರಿಗೆಲ್ಲ ಕ್ಯಾನರೀಜೇನು, ಪೋರ್ಚುಗೀಜೇನು,—ಏನಾದ ರೇನು? ಅವರಿಗೆ ಬರುವ ಹಣದ ಮೇಲೆ ರಾಣಿ ಜಯಲಕ್ಷ್ಮಿ, ಜಯರಾಜ ಪಂಚಮ ಇಲ್ಲವೆ ಯದುವರ್ಧನ ಸಪ್ತಮಾಷ್ಟಮರ ಮುಖಮುದ್ರೆ ಇದ್ದರೆ ತೀರಿತು; ಉಳಿದದ್ದೇನು ಬೇಕು?

ಹೀಗೆಲ್ಲ ದೂರು ಹೇಳಿದಾಗ ಭಾಷಾಶಾಸ್ತ್ರಜ್ಞರಾದ ನನ್ನ ಸ್ನೇಹಿತ ರೊಬ್ಬರು "ಅಲ್ಕಾಣ್ರಿ! ಬೆಂಗಳೂರು ಇದು (cosmopolitan city) ಸಕಲ ಕಲಾಸಂಪನ್ನತೆಯುಳ್ಳ ಶ್ರೀನಗರ! ನಿಮ್ಮಕಡೆ ಮುಂಬೈ ಇದ್ದ ಹಾಗೆ!" ಎಂದು ನನ್ನನ್ನು ಹೆದರಿಸಲು ಪ್ರಯತ್ನಿಸಿದರು. ಮೈಸೂರು ಸಂಸ್ಥಾನದಲ್ಲಿ ಮುಂಬೈಯಂಥ ಅಂತರರಾಷ್ಟ್ರೀಯ ನಗರವೊಂದು ಬೆಳೆಯುವದರಿಂದ ನಮಗೆ ಸಂತೋಷವೇ ಇದೆ. ಮೈಸೂರು ಸಂಸ್ಥಾನದ ಕೀರ್ತಿ ಹೆಚ್ಚಿದಷ್ಟು

ಕರ್ನಾಟಕದ ಕೀರ್ತಿಯೇ ಹೆಚ್ಚಿತೆಂದು ನಾವೆಲ್ಲರೂ ಗಟ್ಟಿಯಾಗಿ ತಿಳಿದಿದ್ದೇವೆ. ಆದರೆ ಇದು ಒಮ್ಮೊಮ್ಮೆ ಮೈಸೂರಿನವರಿಗೆ ತಿಳಿದಿರುವದಿಲ್ಲ. ಅಂತೇ ಅವರು ದೂರು ಪಟ್ಟಣಗಳಿಗೆ ಹೋಗಿ 'ಮೈಸೂರ ಸಂಘ'ಗಳನ್ನು ಸ್ಥಾಪಿಸುತ್ತಾರೆ.

ಅದಿರಲಿ, ಮುಂಬೈನಗರವು ಇಷ್ಟೆಲ್ಲ ಬೆಳೆದಿದ್ದರೂ ಅದರ ಹೊಟ್ಟೆಯಲ್ಲಿ ಅಡಕವಾಗಿದ್ದ 'ಮಹಾಭಾರತವು' ಇನ್ನೂ ನನ್ನ ಸ್ನೇಹಿತರಿಗೆ ತಿಳಿದಿಲ್ಲ. ಮುಂಬಯಿಯು ಗುಜರಾಥೀಯರದೋ ಮಹಾರಾಷ್ಟ್ರೀಯರದೋ ಎಂಬ ಪ್ರಶ್ನೆಯು ಒಮ್ಮೊಮ್ಮೆ ಪ್ರಚಂಡ ಆಂದೋಲನವನ್ನು ಎಬ್ಬಿಸದೆ ಬಿಡಲಾರದು. ಮಹಾತ್ಮಾಜಿಯವರು ಮುಂಬಯಿಯ ಕಾ:ರ್ಪೋರೇಶನ್ನಿನೆದುರು ಒಮ್ಮೆ ಗುಜರಾಥಿಯಲ್ಲಿ ಮಾತನಾಡಿದರು,—ತೆರಿಗೆ ಕೊಡುವವರಲ್ಲಿ ಗುಜರಾಥಿಗಳೇ ಹೆಚ್ಚಿದ್ದ ಕಾರಣ. ಆಗ,—"ನೋಡಿರಿ! ಮುದುಕ ಮುಂಬಯಿಯನ್ನು ಎತ್ತಿಹಾಕಬೇಕೆಂದು ಮಾಡಿದ್ದಾನೆ!" ಎಂದು ಮಹಾರಾಷ್ಟ್ರದ ತುಂಬೆಲ್ಲ ಕೋಲಾಹಲವೆದ್ದಿತು. ಸ್ವಲ್ಪ ದೂರ ಹೋಗಿ ನೋಡಿದರೆ,—ಡ್ಯಾನಜಿಗ್ ಪಟ್ಟಣದ ಸ್ಥಿತಿಯೇನಾಯಿತೆಂಬದನ್ನು ನಾವು ಗಮನಿಸಬೇಕು. ಪಟ್ಟಣವು ಅಂತರ ರಾಷ್ಟ್ರೀಯ ಇಲ್ಲವೆ ಅಂತರ ಪ್ರಾಂತೀಯವಾಗುವದರಲ್ಲಿ ಯಾರ ಆತಂಕವೂ ಇರಲಾರದು. ಆದರೆ ಅದರ ಅಂತರರಾಷ್ಟ್ರೀಯತೆಯು ಅದರ ಸ್ವಂತದ ಸಂಸ್ಕೃತಿಗೆ ಒಳಪಟ್ಟಿರಬೇಕು. ಬೆಂಗಳೂರು ಅಂತರ ಪ್ರಾಂತೀಯವಾಗಲಿ. ಆದರೆ ಅದರ ಕನ್ನಡತನವು ಮಾತ್ರ ಬೆಂಗಳೂರ ಪಂಚಪ್ರಾಣವಾಗಲಿ, ಹೃದಯವಾಗಲಿ. ಅಂತರರಾಷ್ಟ್ರೀಯತೆಯು ಬೆಂಗಳೂರು-ತಾಯಿಯು ಹಚ್ಚಿದ ಕುಂಕುಮವಾಗಬಹುದು. ಅಂತರಪ್ರಾಂತೀಯತೆಯು ಅವಳುಟ್ಟ ಸೀರೆಯಾಗಬಹುದು; ಗಂಡಭೇರುಂಡವು ಅವಳ ಸೀರೆಯ ಸೆರಗೋ ತಲೆಯಲ್ಲಿಟ್ಟ ಆಭರಣವೋ ಆಗಬಹುದು. ಆದರೆ ಅವಳ ಮೋರೆಯ ಮೇಲೆ ಬೇಕು ಲಕಲಕನೆ ಹೊಳೆಯುವ ಕನ್ನಡ ಮಾಲಕುಮಿಯ ಕಳೆ. ದಂಡಿನ ಪೇಟೆಯ ವಿದೇಶೀಯ ತಲೆದುಡಿಗೆಯು ಹೋಗದಿದ್ದರೂ ಸರಿ; ಬೆಂಗಳೂರು-ತಾಯಿಯು ನಕ್ಕ ನಗೆಯಲ್ಲಿ ಪಂಪ-ಚಿಕದೇವರಾಯರ ಪ್ರಸಾದ ಗುಣವಿದ್ದರೆ ಸಾಕು.

ಟಾಟಾ ವಿಜ್ಞಾನ ಸಂಸ್ಥೆಯು ಸಿ. ವಿ. ರಾಮನ್ನರಂಥ ಕೀರ್ತಿವಂತ ವಿಜ್ಞಾನಿಗಳ ಜ್ಞಾನದ ಲಾಭವನ್ನು ಬೆಂಗಳೂರಿಗೆ ಕೊಟ್ಟಿದೆ. ಅಲ್ಲಿಯ

ಉದ್ಯೋಗ–ವ್ಯಾಪಾರ, ಇತಿಹಾಸ–ಪ್ರಗತಿ, ಇವೆಲ್ಲವನ್ನು ಕಾಣಲು ಬೇರೆ ಬೇರೆ ಭಾಗಗಳಿಂದ ಜನರು ಬರುವುದುಂಟು. ಬೆಂಗಳೂರನ್ನು ದಾಟಿ ದಂಡಿನ ಪೇಟೆಯಲ್ಲಿ ಕಾಲಿಟ್ಟಕೂಡಲೇ ಸ್ವಾತಂತ್ರ್ಯದ ವಾತಾವರಣದಲ್ಲಿ ಉಸಿರಾಡಿಸಿ ದಂತಾಗುವದೆಂದು ಕೆಲವರು ಹೇಳುತ್ತಾರೆ. ಆದರೆ ದಂಡಿನ ಪೇಟೆಯಲ್ಲಿ ಯಂತೆ ಒಬ್ಬ ಮನುಷ್ಯನು ಇನ್ನೊಬ್ಬ ಮನುಷ್ಯನನ್ನು ಕೈಗಾಡಿಯಲ್ಲಿ ಕೂಡಿಸಿ ನಾಲ್ಕಾಕಣೆಗೆ ಎಳೆದುಕೊಂಡು ಹೋಗುವ ದೃಶ್ಯಗಳು ಬೆಂಗಳೂರಲ್ಲಿ ಕಣ್ಣಿಗೆ ಬೀಳುವದಿಲ್ಲ. ಅನೇಕಾನೇಕ ಸಂಸ್ಥೆಗಳು ಬೆಂಗಳೂರಲ್ಲಿ ಮನೆ ಮಾಡಿಕೊಂಡಿವೆ. ದೇಶೀಯ ವಿದ್ಯಾಶಾಲೆಯಂಥ ಜನತೆಯಿಂ—ಕಟ್ಟಿದ ವಿದ್ಯಾ ಸಂಸ್ಥೆಗಳು ಮಾತ್ರ ಇಲ್ಲಿ ತೀರ ವಿರಳವೆಂದು ಹೇಳಬೇಕಾಗುತ್ತದೆ. ಈ ವಿಷಯವನ್ನು ಹಾಗೂ ಸಿನೇಮಾ ಕಂಪನಿಯ ಅತ್ಯಗತ್ಯ ಮಾತನ್ನು ಬಿಟ್ಟರೆ ಇಂದು ಭಾರತದಲ್ಲೆಲ್ಲ ಕಂಡುಬರುವ ಪ್ರಗತಿಯು ಬೆಂಗಳೂರಲ್ಲಿಯೂ ಕಂಡುಬರುತ್ತದೆ. ಅಯ್ಯರರ ಆರೋಗ್ಯ ಮಂದಿರದಲ್ಲಿ ನಾವು ಶಕ್ತಿಯನ್ನು ಬೆಳಸಿಕೊಂಡ ಕೂಡಲೇ ರಾಮಕೃಷ್ಣಾಶ್ರಮದಲ್ಲಿ ಮುಕ್ತಿಯ ಹಾದಿಯನ್ನು ಹಿಡಿಯಬಹುದು. ಟಿಪ್ಪು ಸುಲ್ತಾನನ ಕಾಲದಲ್ಲಿ ಬಿದ್ದ ಕೋಟೆಯನ್ನೂ ಕತ್ತಲು ಕೋಣೆಗಳನ್ನೂ ಕಂಡದ್ದಾದರೆ 'ಅಠರಾ ಕಚೇರಿ' ಯಂಥ ಕಟ್ಟಡ ಗಳನ್ನು ನೋಡಿ, ಶೇಷಾದ್ರಿ ಹಾಲಿನಲ್ಲಿ ಓದಿ, ಸರ್ ಪಟ್ಟಣಶೆಟ್ಟಿ ಹಾಲಿನಲ್ಲಿ ಉಪನ್ಯಾಸವೊಂದನ್ನು ಕೇಳಿ ಲಾಲ್ ಬಾಗಿನಲ್ಲಿ ಹೋಗಿ ತಿರುಗಾಡಿ ಬರ ಬಹುದು, ಸನ್ನೆಗೆಯ್ದಂತೆ ಮೋಟಾರುಗಾಡಿಯೊಂದಿದ್ದರೆ ಮಾತ್ರ! ಇಲ್ಲಿಯ ಉತ್ತಮ ಸಿನೇಮಾ ಗೃಹಗಳಲ್ಲಿ ಚಲಚಿತ್ರಗಳನ್ನು ನೋಡಿ ಇಲ್ಲವೆ ಸೆಂಟ್ರಲ್ ಕಾಲೇಜಿನಲ್ಲಿ ಓದಿ ಓದಿ ಕಣ್ಣು ಕೆಡಿಸಿಕೊಂಡು ಮಿಂಟೋ ಆಸ್ಪತ್ರೆಗೆ ಹೋಗಿ ಪ್ರಸಿದ್ಧ ನೇತ್ರ ವೈದ್ಯರಿಂದ ಚಿಕಿತ್ಸೆ ಹೊಂದುವ ಸಮಾಧಾನವನ್ನು ದೊರಕಿಸಬಹುದು. ಬೆಂಗಳೂರು ಪ್ರೆಸ್ಸಿನಲ್ಲಿ ಪುಸ್ತಕಗಳನ್ನು ಮುದ್ರಿಸಿ ಕೊಂಡು ಸತ್ಯಶೋಧನ ಭಾಂಡಾರದಲ್ಲಿ ಆದರ ಪ್ರತಿಗಳನ್ನು ಮಾರಲಿಕ್ಕಿಡ ಬಾರದೆ? ಇಲ್ಲಿಯ ಕೌನ್ಸಿಲ್ಲಿನಲ್ಲಿಯ ರಾಜಕೀಯ ಚರ್ಚೆಗಳನ್ನು ಕೇಳಿ, ಉತ್ತಮ ಉಪಹಾರ ಗೃಹಗಳಲ್ಲಿಯ ತಿಂಡಿ ತಿನಿಸನ್ನು ತಿಂದು ಚಹ, ಅಲ್ಲಲ್ಲ! ಕಾಫಿ ಕುಡಿದು 'ಸೆಂಚುರಿ' ಕ್ಲಬ್ಬಿನ ಮುಗ್ಗು ಬೆಳಕಿನಲ್ಲಿ ನಾಲ್ಕು ಸವಿ ಮಾತಾಡಿ, ಇಳಿದುಕೊಂಡಿದ್ದ ಆಧುನಿಕತಮ ಹೋಟೇಲಿಗೆ ಹೋಗಿ ವಿಶ್ರಮಿಸ

ಬಹುದು. ಬೆಂಗಳೂರಲ್ಲಿಲ್ಲದ ಆಸ್ಪತ್ರೆಗಳಿಲ್ಲ, ಆರೋಗ್ಯ ಮಂದಿರಗಳಿಲ್ಲ, ಉಪಹಾರಗೃಹಗಳಿಲ್ಲ. ಸಂಸ್ಕೃತ ಕಾಲೇಜಿಗೆ ಹೋಗಿ ವೇದಘೋಷದ ಆಂಗ್ಲ ತರ್ಜುಮೆಯನ್ನು ಕೇಳಿರಿ. ಕ್ರಿಸ್ತ ಮಂದಿರಕ್ಕೆ ಹೋಗಿ ಕನ್ನಡದಲ್ಲಿ ಕ್ರಿಸ್ತ ಪುರಾಣಕ್ಕೆ ಕಿವಿಗೊಡಿರಿ, ಪರಿಷನ್ಮಂದಿರಕ್ಕೆ ಬಂದು ಕನ್ನಡ ಬಾವುಟ ವನ್ನು ವಂದಿಸಿರಿ. ಸಂಸ್ಥೆಯ ಬದಿಗೆ ಸಂಸ್ಥೆಯು ನಿಂತು ನಿಮ್ಮನ್ನು ಸ್ವಾಗತ ಗೈಯುತ್ತಿರುತ್ತದೆ.

ಆದರೆ ಬೆಂಗಳೂರಿನಲ್ಲಿ ಎಂ. ಎಸ್. ಎಮ್. ಗಾಡಿಯಿದೆ; ಜಿ. ಐ. ಪಿ. ಇಲ್ಲ! ಇಲ್ಲಿ ಎಲ್ಲವೂ ಸುಸ್ತಾಗಿ ಸಾಗಬೇಕು. ಕುಂಟಿಗೋ! ಕೂರಿಗೋ! ಎನ್ನುತ್ತ ಹೊಲ ಹಸನಾಗಬೇಕು. ಹತ್ತು ವರ್ಷಗಳ ಹಿಂದೆ ಉದ್ಭವಿಸ ಲಿಕ್ಕಿದ್ದ ವಸಂತನು ಇತ್ತೀಚೆಗೆ ಬೆಂಗಳೂರಲ್ಲಿ ತಲೆಯೆತ್ತಿದ್ದಾನೆ. ಬೆಂಗಳೂರು ಇನ್ನೂ ಗಮನಿಸಿದ ಹಾಗಿಲ್ಲ.

ಮೈಸೂರು ಬೋಂಡ { ಇಲ್ಲಾ? ಣ್ಣಾನೆ? } ಸುಂಗಿ
ಕಾಫಿಯಿಂದಟ್ಟಿ { ನ್ನಾವೆ? }

ಸುಖದಿಂದಿರುವದನ್ನು ಬಿಟ್ಟು ಉಪನ್ಯಾಸಮಾಡಿ ತಲೆ ಕೆಡಿಸುವದೆ ಇಲ್ಲವೆ ಕೇಳಿ ಕೆಡಿಸಿಕೊಳ್ಳುವದೆ? ಅಲ್ಲದೆ ಮೇಲೆ ಹೇಳಿದಂತೆ "ಕನ್ನಡವೆಂದರೆ ನಮಗೇನು?" ಎಂದು ಬಗಲೆತ್ತಿ ನಿಲ್ಲುವ ಬಾಗವಾಸರೇ ಬಹಳ. ಇಂಥವ ರಿಗೆ ಭಗವದ್ಗೀತೆಯ ಕೃಷ್ಣನಿಗಿಂತ ಉಡುಪಿ ಕೃಷ್ಣನ ಮೇಲೆಯೇ ಹೆಚ್ಚು ವಿಶ್ವಾಸ. ಕನ್ನಡ–ಮೈಸೂರುಗಳ ಬಾವುಟವಂತಿರಲಿ; ತಮ್ಮ ಬಾವುಟವನ್ನು ಹೋದಲ್ಲೆಲ್ಲ ಎತ್ತಿಹಿಡಿಯುವದೇ ಇವರ ಗೊತ್ತು ಗುರಿ. ಇವರು ಓದುವ ಪೇಪರು ಹಿಂದು ಇಲ್ಲವೆ ಮದ್ರಾಸ ಮೇಲು; ಇವರು ಚರ್ಚಿಸುವುದು ಜಗತ್ತಿನ ರಾಜಕಾರಣ; ಕನ್ನಡದ ಸಸಿಯನ್ನು ಕಂಡರೆ ಕಮರಿಹೋಗು ವಂತೆ ಅದರ ಕಡೆಗೆ ಇವರು ನೋಡುತ್ತಾರೆ. ಹೀಗೆ ಪರಕೀಯರಾಗಿ ಉದರಾರ್ಥವಾಗಿ ಬಂದು ತಿಂದು ತೇಗಿ ತಂಗಿದವರು ತಿಂದ

ಬೋಂ { ಇಲ್ಲಾ ಣ್ಣಾನೆ? } ಡಾಕ್ಕೆ,
{ ನಾವೆ? } ಎರಡು

ಬಗೆಯುತ್ತ ಉದಾಸೀನರಾಗಿರುವತನಕ ಬೆಂಗಳೂರು ತನ್ನ ವ್ಯಕ್ತಿತ್ವ ವನ್ನು ಸಂಪೂರ್ಣವಾಗಿ ಕಾಯ್ದುಕೊಳ್ಳದೆ ಕರ್ನಾಟಕಕ್ಕೇ ರಂಧ್ರಸ್ಥಾನ ವಾಗುವದರಲ್ಲಿ ಅನುಮಾನವಿಲ್ಲ.

ಬೆಂಗಳೂರು ಚೆಲುವಾದ ಪಟ್ಟಣ. ಬಸ್ಸುಗಳು ಬೆಂಗಳೂರಿನ ಬಿಡಿ ಬಿಡಿ ಭಾಗಗಳನ್ನು ಒಂದಾಗಿಸಿವೆ. ಇಲ್ಲಿಯ ವಿದ್ಯುದ್ದೀಪಗಳು ಚಿಕ್ಕೆಗಳಂತೆ ಅಸಂಖ್ಯಾಕವಾಗಿವೆಯೆಂದರೆ ಸರಕಾರವೋ ಸ್ಥಾನಿಕ ಸಂಸ್ಥೆಯೋ ಲೆಕ್ಕ ವಿಟ್ಟಲ್ಲೆಂದು ನುಡಿದ ದೋಷವು ತಗಲಬಹುದು. ಆದರೆ ಇಲ್ಲಿ ವಿದ್ಯುತ್ತು ನೀರಿನಷ್ಟು 'ಸೋವಿಯಾಗಿದೆ' ವಿಪುಲವಾಗಿದೆ, ಸಾರ್ವತ್ರಿಕವಾಗಿದೆ. ಒಂದು ಸಂಜೆ ನಾವು ಕೆಲ ಸ್ನೇಹಿತರು ಕೂಡಿ ಗವಿಪುರದ ಹತ್ತಿರದಲ್ಲಿರುವ ಸಂಣ ಕಲ್ಲುದಿನ್ನೆಯನ್ನೇರಿ ಕುಳಿತಿದ್ದೆವು. ಎಳೆಯ ಚಂದ್ರನ ಹತ್ತಿರ ಅಷ್ಟೇ ತೇಜಸ್ವಿಯಾದ ಬೆಳ್ಳಿಯು ಥಾಳವಾಗಿ ಬೆಳಗುತ್ತಿತ್ತು. 'ಬೆಳ್ಳಿಯ ಪಾತ್ರೆಯೊಳಗಿಂದ ಊದಿ ಬಿಟ್ಟ ಸಾಬೂನಿನ ಗುಳ್ಳೆಯಂತೆ!' ಎಂದು ಕವಿ ಗಳೊಬ್ಬರು ಉದ್ಗಾರ ತೆಗೆದರು. ಅಷ್ಟರಲ್ಲಿ ಎಲ್ಲರ ದೃಷ್ಟಿಯೂ ಸುತ್ತೆಲ್ಲ ಹಬ್ಬಿ ಬರಿ ವಿದ್ಯುದ್ದೀಪಗಳಿಂದ ಕಾಣಿಸಿಕೊಳ್ಳುವ ಪಟ್ಟಣದ ಕಡೆಗೆ ಹೊರಳಿತು. 'ಬೆಂಗಳೂರು ಇಷ್ಟು ಚೆಲುವಾಗಿದೆಯೆಂದು ನನಗನಿಸಿರಲಿಲ್ಲ' ಎಂದು ಅಲ್ಲಿಯೇ ಅನೇಕ ವರುಷಗಳನ್ನು ಕಳೆದ ಇನ್ನೊಬ್ಬರು ನುಡಿದರು. ರಹದಾರಿಗಳ ನಕಾಶವನ್ನು ಬೆಳಕಿನ ರೇಖೆಗಳಲ್ಲಿ ಮೂಡಿಸುತ್ತಿರುವ ದೀಪ ಮಾಲೆಗಳನ್ನು ಕಂಡು 'ಲಲಿತಾದ್ರಿಯ ಮೇಲಿಂದ ಪುಟ್ಟಪ್ಪನವರಿಗೆ ಸಾಲಾಗಿ ಡೊಂಕಾಗಿ ............' ಎಂದು ಮತ್ತೊಬ್ಬರು ಬಾಯಿ ತೆಗೆಯುತ್ತಿರಲು 'ಕಾವ್ಯದಲ್ಲಿ ಇಷ್ಟೊಂದು ಭೌತಿಕವಾದ ವಿಶೇಷಗಳು (details) ಬರಬಾರದು' ಎಂದು ಮಗುದೊಬ್ಬರು ಅವರ ಬಾಯಿಗೆ ಬೀಗಹಾಕಿದರು. ಬಿಡಿ ಬಿಡಿಯಾಗಿ ಆದರೂ ಅಲ್ಲಲ್ಲಿ ಒಂದುಗೂಡಿ ಗುಂಪು ಗುಂಪಾಗಿ ನಿಂತ ದೀಪಸ್ತಂಭಗಳನ್ನು ಕಂಡು 'ಅಕ್ಕಿತುಂಬಿದ ಬಟ್ಟಲದಲ್ಲಿ ಚುಚ್ಚಿದ ಊದಿನಕಡ್ಡಿಗಳು ಆ ಬಟ್ಟಲ ದಲ್ಲಿ ಹರಿದಾಡುವ ಇರುವೆಗೆ ಕಂಡಂತೆ ಈ ದೀಪಗಳು ನಮಗೆ ಕಾಣುತ್ತವೆ' ಎಂದಂದು ವಿಮಾನಗೃಹವೊಂದಾಗಿ ಅದರ ಅರಸು-ಬೆಳಕುಗಳು (Search-lights) ಮುಗಿಲಲ್ಲಿ ತಮ್ಮ ನೀಳ್ತೋಳುಗಳನ್ನು ಬೀಸಾಡಹತ್ತಿದಾಗ ಪಾರ್ಲಿ ಮೆಂಟ ಹಿಲ್‌ದ ಮೇಲಿಂದ ಲಂಡನ್ ಪಟ್ಟಣವು ಕಾಣುವಹಾಗೆ ಇಲ್ಲಿಂದ ಬೆಂಗಳೂರು ಕಾಣಬಹುದೆಂದು ಇನ್ನೂ ಒಬ್ಬರು ಉದ್ಗಾರ ತೆಗೆದರು. ಆಗ 'ಬೆಂಗಳೂರು ಇಷ್ಟು ಚೆಲುವಾಗಿದೆಯೆಂದು ನನಗೆನಿಸಿರಲಿಲ್ಲ' ಎಂದು ನುಡಿ ದವರು ಇನ್ನೊಂದು ಎಂಟು—ಹತ್ತುವರ್ಷಗಳಲ್ಲಿ ಅದೂ ಬಂದುಬಿಡುತ್ತದೆ ಎಂದು ಆಶ್ವಾಸನಕೊಟ್ಟರು.

ನಡುವಿನ ಯಾವುದಾದರೊಂದು ದಿನ್ನೆಯನ್ನೇರಿ ನೋಡಿದಾಗ ಸುತ್ತೆಲ್ಲ ಪಸರಿಸಿದ ಬೆಂಗಳೂರು ನಗರವು ಸಮುದ್ರವು ಹತ್ತಿರವಿಲ್ಲದ ಮಾರ್ಸ್ಲೆ ನಗರದಂತೆ ಶೋಭಿಸುತ್ತದೆ. ರಾಜಾಶ್ರಯದ ಮೂಲಕ ಬೆಂಗಳೂರಿನಲ್ಲಿ ಕರ್ನಾಟಕದ ಉಳಿದ ಭಾಗಗಳಲ್ಲಿಯಂತೆ ಕನ್ನಡದ ಪರಂಪರೆಯು ಕಡಿದು ಬೀಳಲಿಲ್ಲ; ಅವ್ಯಾಹತವಾಗಿ ನಡೆದುಬಂದಿತು. ಇಂದಿಗೆ ಕನ್ನಡದ ಧ್ವಜವನ್ನು ಎತ್ತಿಹಿಡಿದ ಪರಿಷತ್ತು ಬೆಂಗಳೂರಲ್ಲಿಯೇ ನೆಲೆಯೂರಿ ನಿಂತಿದೆ. ಮೂರು ನಾಲ್ಕು ತಲೆಮಾರಿನ ಸಾಹಿತಿಗಳನೇಕರನ್ನು ಇಂದು ನಾವು ಬೆಂಗಳೂರಲ್ಲಿ ಕಾಣಬಹುದು. ಮಹರಾಷ್ಟ್ರದಲ್ಲಿ ಪುಣೆಯಿದ್ದಂತೆ ಕರ್ನಾಟಕದಲ್ಲಿ ಬೆಂಗಳೂರು ಕನ್ನಡದ ಮರ್ಮಸ್ಥಾನವಾಗಿದೆ. ಆದರೆ ಇದರ ಅರಿವು ಇನ್ನೂ ಬೆಂಗಳೂರಿಗೆ ಚನ್ನಾಗಿ ಬರಬೇಕು.

—ಕ್ರಾಂತಿಪ್ರಿಯ

---

# ರಾಯಚೂರು

ನಿಲ್ಮನೆಯ ಆವರಣದ ಗಡಿಯಲ್ಲಿದ್ದ ಸುಂಕದ ಕಟ್ಟೆಯನ್ನು ದಾಟಿದಿರೆಂದರೆ ಮೊಗಲಷಾಯಿ ರಾಜ್ಯದಲ್ಲಿ ಕಾಲಿಟ್ಟಿರೆಂದು ತಿಳಿಯತಕ್ಕದ್ದು. ಪ್ರವಾಸಿಗಳ ಮೂಟೆಗಂಟಿನ ತಪಾಸಣೆಯ ಅವಾಂತರ ಮುಗಿಯುವದರೊಳಗಾಗಿ ಮೊಗಲಷಾಹಿಯ ಒಂದು ಮಟ್ಟಿನ ಮಾಹಿತಿ ಆಗಿಯೇ ಆಗುವುದು. ಮೊಗಲಾಯಿ ಶಬ್ದ ಇಲ್ಲಿ ಜನರ ವಾಡಿಕೆಯಿಂದ ಒಂದು ಪರಿ ಅರ್ಥವಿಶೇಷವನ್ನು ಹೊಂದಿದೆ. ಯಾವುದೇ ಕಾರ್ಯವು ಸುಸ್ತಾಗಿ ಸಾಗಿದೆ ಎಂದು ತಿಳಿಯುವ, ಆಗ "ಮೊಗಲಾಯ್ರಪ್ಪ!" ಎಂತ ಕೇಳಬರುವುದಿಲ್ಲವೇ? ಹಳೆಯ ರೀತಿಯನ್ನಪ್ಪಿಕೊಂಡಿದ್ದ ಯಾರೊಬ್ಬರೂ ಇಲ್ಲಿ ಮೊಗಲಾಯಿ ಮನುಷ್ಯ ಎನ್ನಿಸಿಕೊಳ್ಳುವುದಿಲ್ಲವೇ? ವರ್ಷ ಪರಂಪರೆ ಕಚೇರಿಗಳಲ್ಲಿ ನಡೆಯುವ ಕಾರವಾಯಿಗಳನ್ನು (ವ್ಯಾಜ್ಯ) ಕಂಡಾಗ, ವಿಚಾರಣ ರೀತಿಯನ್ನು

ಕೇಳಿದಾಗ, ದೇಶದ ನಾಗರಿಕತೆ ನೋಡಿದಾಗ, ಮೊಗಲಾಯಿ ಸಂಸ್ಥಾನ ದೊಳಗೆ ಹುಟ್ಟಿಸಿದ್ದಕ್ಕಾಗಿ " ಹೇ ! ದಯಾಘನ ! ಪ್ರಭೋ ! ಇಂದಿಗೆ ನಿನ್ನ ಬಿರುದು ಸಾರ್ಥಕವಾಯಿತಯ್ಯ ! " ಎಂದು ದೇವರನ್ನು ಮುಕ್ತ ಕಂಠದಿಂದ ಹೊಗಳಬೇಕೆನ್ನಿಸುತ್ತದೆ. ಮಾಯಿಯೊಳಗೆ ಮಾಯೆ ಇದೆಯೋ ಇಲ್ಲೋ, ಆದರೆ ಮೊಗಲಾಯಿಯೊಳಗೆ ಮೊಗಲಾಯಿಯಾಗಿರುವ ಸಣ್ಣ ಪುಟ್ಟ ಸಂಸ್ಥಾನಗಳನ್ನು ಚಿಕ್ಕದೊಡ್ಡ ಜಹಗೀರುಗಳನ್ನು ಕಾಣಲು ವೇದಾಂತಿಯ ಕಣ್ಣು, ಕೈಗಡ ತರಹೋಗಬೇಕಾಗಿಲ್ಲ.

ನೂರಾರು ಮೈಲು ಸುತ್ತಳತೆಯಲ್ಲಿರುವ ಅನೇಕ ಹಳ್ಳಿಗಳು ಹೊರಗಿನ ಪ್ರಪಂಚದೊಂದಿಗೆ ಬಾಂಧವ್ಯ ಬಯಸಿದರೆ ಮುಕ್ತದ್ವಾರದಂತಿರುವ ರಾಯಚೂರ್ ನಿಲ್ಮನೆಗೆ ಶರಣು ಹೋಗಬೇಕು. ರಹದಾರಿಯೊಡನೆ ಸಂಪರ್ಕ ಕಾಣದ ಈ ಜಿಲ್ಲೆಯ ತಾಲೂಕುಗಳಿಗೆಲ್ಲಾ ರಾಯಚೂರು ನಿಲ್ಮನೆಯೇ ಗತಿ. ರಹದಾರಿಯ (ರೈಲುಮಾರ್ಗ) ಆಶ್ರಯದಿಂದ ರಾಯಚೂರೇನೋ ದೊಡ್ಡ ವ್ಯಾಪಾರ ಕೇಂದ್ರವಾಗಲು ಒಳ್ಳೇ ಯೋಗ ಒದಗಿ ಬಂದಿತು. ಊರ ನಾಲ್ಕು ದಿಕ್ಕಿನ ರಸ್ತೆಗಳಲ್ಲಿ ಅಸಂಖ್ಯಾತ ಹಳ್ಳಿಗಳಿಂದ ಹತ್ತಿ, ಅರಳಿ, ಕಾಳುಕಡಿಗಳನ್ನು ತುಂಬಿಕೊಂಡು ಇರುವೆಗಳ ಹಿಂಡಿನಂತೆ ಸಾಲಿಟ್ಟ ಎತ್ತಿನ ಗಾಡಿಗಳು ಬೆಳಗಾಗ ಕಾಣಬರುವುವು. ತಂದಿದ್ದ ಮಾಲು ಮಾರಾಟವಾಗಿ, ಬೇಕಾದ ಮಾಲು ಭರ್ತಿಮಾಡಿಕೊಂಡು ಬೆಳಿಗ್ಗೆ ಬಂದ ಹಾದಿಯಲ್ಲಿ ಧೂಳಿನ ಹೊಗೆ ಎಬ್ಬಿಸುತ್ತ ಹೋಗುವ ಅನೇಕ ಚಕ್ಕಡಿಗಳ ಸಾಲು ಸಾಯಂಕಾಲ ನೋಡುತ್ತೇವೆ. ಇಂತಹ ವ್ಯಾಪಾರದ ತಳಹದಿಯ ಮೇಲೆ ಬೆಳೆದು ನಿಂತು ಊರ ತುಂಬೆಲ್ಲ ಚದರಿಕೊಂಡಿದ್ದ ಅಡ್ತಿ ದುಖಾನಗಳೆಲ್ಲಾ ಇತ್ತೀಚೆಗೆ ಸರ್ಕಾರದ ಒತ್ತಾಯದಿಂದ ಒಂದೆಡೆಗೆ ಸೇರಿ ಗಂಜಿನ ಹೆಸರಿನಿಂದ ನಾಮಕರಣಹೊಂದಿವೆ. ಗಂಜಿನ ವಿಶಾಲ ಮೈದಾನಿನಲ್ಲಿ ಬದಿಯಿಂದ ಬದಿಗೆ ಇದಿರು–ಬದಿರು ಸಾಲಿನಲ್ಲಿದ್ದು ಅಚ್ಚುಕಟ್ಟಾದ ಸುಂದರವಾದ ಒಂದೇ ಬಗೆಯ ಶಿಸ್ತಿನಿಂದ ಕಟ್ಟಲ್ಪಟ್ಟ ಮಳಿಗೆಗಳೂ ಇವುಗಳ ನಟ್ಟ ನಡುವೆ ಕೈದೋಟಿನಿಂದ ಆವೃತವಾದ ಸರಕಾರಿ ಆಫೀಸೂ ಕೂಡಿ ಊರಿಗೆ ಈ ಮೊದಲು ಇಲ್ಲದಿದ್ದ ಒಂದು ಹೊಸ ಶೋಭೆಯನ್ನು ತಂದಿವೆ.

ಗಂಜಿನ ದೊಡ್ಡ ಬಯಲಲ್ಲಿ ರಾಶಿರಾಶಿಯಾಗಿ ಬಂದು ಬೀಳುವುದನ್ನು, ಬಂದದ್ದು ರೈಲಲ್ಲಿ ರಫ್ತಾಗುವುದನ್ನು ನೋಡಿದರೆ ರಾಯಚೂರು ದೂರ

ದೂರ ವ್ಯಾಪಾರ ಸ್ಥಳಗಳಲ್ಲಿ ತನ್ನ ಪ್ರಶಸ್ತಿ ಬೆಳಸಿಕೊಂಡಿದ್ದರ ಮರ್ಮ ತಿಳಿದಂತಾಯಿತು. ಪಟ್ಟಣವಾಸಕ್ಕೆ ಮನಸೋತು ಎಷ್ಟೋ ಸೆಟ್ಟರು, ನಾಡ ಗೌಡರು, ದೇಸಾಯಿಗಳು, ಇಲ್ಲಿ ವ್ಯಾಪಾರದಿಂದ ಲಾಭ ಸುರಿಯಲು ಅಂಗಡಿ ಹಚ್ಚಿ, ಹಚ್ಚಿದ ಅಂಗಡಿಯು ಹಳ್ಳಿಯಿಂದ ತಂದ ಗಳಿಕೆಗೇ ನೀರು ತರಲು, ದೊಡ್ಡ ಊರೊಳಗೆ ತಮ್ಮ ಹೆಸರಿನಿಂದ ಚಲಾವಣೆಯೊಂದಿದ್ದರೆ ಸಾಕೆಂದು ಸಂತೃಪ್ತಿಹೊಂದಿದ್ದಾರೆ. ಆದರೆ ಕೆಟ್ಟು ಪಟ್ಟಣ ಸೇರಿದ ಅನೇಕರು ಮಟ್ಟಸಮಾಡಿಕೊಂಡ ವಿಚಿತ್ರವೂ ಇಲ್ಲಿ ಇಲ್ಲದೆ ಇಲ್ಲ.

ಹಿಂದೆ ರಾಯಚೂರು ಅದೆಷ್ಟು ಬಾರಿ ರಣಕಹಳೆ ಊದಿ ಉಬ್ಬಿತ್ತು, ಕುಗ್ಗಿತ್ತು, ಎಂದು ಕಾದಂಬರಿ ಇತಿಹಾಸಗಳು ಹೇಳಿಯಾವು. ಆದರೆ ಊರ ಮೈಯಲ್ಲಿ ಅದರ ಕುರುಹುಗಳಾದ ಕೋಟೆ, ಬುರುಜು, ಕಂದಕ, ಎಲ್ಲೆಲ್ಲೂ ಪ್ರತಿಷ್ಠೆಯ ಬೇರು ಬಿಟ್ಟು ನಿಂತಿವೆ. ಊರಲ್ಲಿ ತಿರುಗಾಡುವಾಗ ಮೇಲಿಂದ ಮೇಲೆ ತೋರಿಕೊಳ್ಳುವ ಕೋಟೆಗೋಡೆಯನ್ನೂ, ತೆಗೆದಿದ್ದ ಕಣ್ಣಿಟುಕಿಸಿ ಅವನ್ನು ಮತ್ತಿಷ್ಟು ಅಗಲವಾಗಿಸಿ ಒಮ್ಮೆ ದಿಟ್ಟಿಸಿ ನೋಡುತ್ತೇವೆ. ಧೈರ್ಯವು ತುಂಬಿಕೊಂಡಿದ್ದ ಭವ್ರ ಕೋಟೆಗಳನ್ನು ಕಂಡವರಿಗೆ ಗಾಂಭೀರ್ಯವೇ ಮೈವೆತ್ತಂತಿದ್ದ ರಾಯಚೂರ ಕೋಟೆಯ ರಚನೆಯಲ್ಲಿ ಏನೂ ಕಾಣಸಿಗದು. ಎಂಥಾ ಕೋಟೆ ಇದು? ಇಷ್ಟಕ್ಕೇ ಮುಗಿಯಿತೇ ಇದರ ಚರಿತೆ! ಊರು ಕೋಟೆಯ ಬೆನ್ನಿಗೆ ಬಿದ್ದರೆ, ಕೋಟೆ-ಕಣಿವೆಯು ಬೆಟ್ಟ ಕೆರೆಗಳ ಬೆನ್ನಿಗೆ ಬಿದ್ದಿವೆ. ಆದರೆ ಕೆರೆಗೆ ವಡಗಳಾವು? ಅವೆ ಬೆಟ್ಟಗಳು, ಮಿಟ್ಟಿಯ ಮೇಲೇರಿ ನಿಂತಿದ್ದ ಕೋಟೆಯ ಗೋಡೆ. ಹೀಗೆ ಒಂದರ ಆಸರದಿಂದ ಒಂದನ್ನು ರಚಿಸಿ ನಟ್ಟನಡುವೆ ಊರು ಕಟ್ಟಿದ ಕಾರ್ಮಿಕ ಕೌಶಲವು ರಾಯಚೂರಿಗೆ ಮಾತ್ರ ಸಂದಿದೆ. ಬೆಳದಿಂಗಳ ನಡುರಾತ್ರಿಯಲ್ಲಿ ನೀರವ ಪಟ್ಟಣದ ಕೋಟೆಯ ಸಿಂಬೆಯಲ್ಲಿ ಹಾದು ಬುಗರಿಯ ಹಾಗೆ ಅಡ್ಡಾಡುವಾಗ ನನ್ನ ಮನಸ್ಸಿಗೆ ಅನ್ನಿಸದೆ ಬಿಟ್ಟಿಲ್ಲ! ಕನ್ನಡ ರಾಜ್ಯ ರಮಾರಮಣನ ಬೇಹುಗಾರನು ಭಾಮಿನಿ ಸುಲ್ತಾನರ ಗಡಿನಾಡಾಗಿದ್ದ ಈ ಊರಲ್ಲಿ ನಾಲ್ಕುನೂರು ವರ್ಷಗಳ ಹಿಂದೆ ಇಂತೊಂದು ರಾತ್ರಿ ಕೋಟೆಯ ಮರ್ಮಸ್ಥಾನ, ರಂಧ್ರಸ್ಥಾನಗಳನ್ನು ನಿರೀಕ್ಷೆಯ ಕಣ್ಣಿಂದ ನೋಡುತ್ತ ತಿರುಗಿರಬಾರದೇಕೆ? ಆದರೆ ಇದಕ್ಕೇನೆನ್ನ ಬೇಕು? ಊರು ಮುಂದಕ್ಕೆ ಚಾಚಿಕೊಂಡು ಹೋಗದಂತೆ ಬಂಗಲೆಗಳ ಉಪ

ನಗರ ಸೃಷ್ಟಿಯಾಗದಂತೆ ಎತ್ತ ಹೋದತ್ತ ನಮ್ಮ ಇದಿರು ಬಂದುನಿಲ್ಲುವ ಅವೇ ಬೆಟ್ಟಗಳು, ಅವೇ ಕೋಟೆಯ ಗೋಡೆಗಳು, ಅವೇ ಕೆರೆಗಳು ತಡೆಯಾಗಿವೆ.

'ಕ್ರಾಂತಿಪ್ರಿಯ'ರು ಹುಬ್ಬಳ್ಳಿಯ ವಿಚಾರವಾಗಿ ಬರೆಯುತ್ತಾ ವ್ಯಾಪಾರಕ್ಕೂ ಧರ್ಮಕ್ಕೂ ಎತ್ತಣದೋ ಸಂಬಂಧವಿದೆ, ಎಂದುದು ಹುಬ್ಬಳ್ಳಿಗೆ ಮಾತ್ರ ಅನ್ವಯಿಸದೆ ರಾಯಚೂರಿಗೂ ಅನ್ವಯಿಸುವಂತಿದೆ. ರಾಯಚೂರಲ್ಲಿ ಹುಬ್ಬಳ್ಳಿಯ ದೊಡ್ಡ ವ್ಯಾಪಾರದ ಪಂದರವಿಲ್ಲದೆ ಹೋದರೂ ಹುಬ್ಬಳ್ಳಿಯಂತೆ ಇದೊಂದು ವ್ಯಾಪಾರದ ಕೇಂದ್ರವೇನೋ ಅಹುದು. ಆರೂಢರ ಮಠದಷ್ಟೇ ದೊಡ್ಡ ಮಠವಿಲ್ಲದಾಗ್ಯೂ ಮಾಣಿಕನಗರದ ಸುಪ್ರಸಿದ್ಧ ಮಾಣಿಕಪ್ರಭುಗಳ ಸಣ್ಣದಲ್ಲದೊಂದು ಪೀಠದ ಪುಣ್ಯವಿದೆ. ಭಕ್ತಾದಿಗಳ ಅಂಗಡಿಯಿಂದ ಹರಿದುಬಂದ ಹಣವೇ ಈ ಧರ್ಮಪೀಠದಸುತ್ತ ಛತ್ರಮಂದಿರಗಳ ಕೋಟೆ ಕಟ್ಟಿದೆ. ಧರ್ಮಕ್ಕೆ ಹಣದ ಕಾವಲು, ಹಣಕ್ಕೆ ಧರ್ಮದ ಕಾವಲು. ಧರ್ಮದೊಂದಿಗೆ ವ್ಯವಹಾರದ ಗೆಳೆತನ–ಬಳಕೆ ನಮ್ಮ ಕರ್ನಾಟಕದ ಉದ್ದಕ್ಕೆ ಇದ್ದರೂ ಇರಲುಂಟು. ಪ್ರಭುಗಳ ಶಿಷ್ಯ ಮೇಳ–ಸಪರಿವಾರ ಆಗಾಗ ಊರಿಗೆ ಬಿಜಯಮಾಡಿಸುವುದು ಬಹಳಕಾಲದಿಂದಲೂ ನಡೆದುಬಂದಿದೆ. ಆಗ ಪ್ರಭುಗಳ ಸಾನ್ನಿಧ್ಯದಲ್ಲಿ ನಡೆಯುವ ಶ್ರಾವ್ಯ, ದೃಶ್ಯ,–ರಂಜಕವಾದ ಭಜನೆ, ಗಾನ, ಸಮಾರಾಧನೆಗಳ ಮುಗಿಯದ ಮಾತೇ ಮಾತು ಊರಿನಲ್ಲೆಲ್ಲ. "ಪ್ರಭು ತೇರೇ ಮಹಿಮ"

ದೇವರು ರಾಯಚೂರು ಕೈಬಿಟ್ಟಿಲ್ಲವೆಂದು ಸಂತೈಸಿಕೊಂಡೇವೆಂದರೆ ಆಳಿಕೆ ಕೈಬಿಟ್ಟ ಬೀಳುಹೊಲವೆಂದು ಯಾರಿಗೆ ಹೇಳಿಕೊಳ್ಳಬೇಕು ? ಕೃಷ್ಣೆ ತುಂಗೆಯರು ಮೈದೊಳೆವ ನಲು ನಾಡಾಗಿಯೂ ಮಳೆ ಕೈಕೊಟ್ಟಾಗ ಬಂಜರು ಭೂಮಿ. ನಳವೇನೋ ಕೃಷ್ಣೆಯ ನೀರನ್ನು ಊರಿಗೆ ತಂದು ಸುರಿಯುತ್ತಿದೆ. ಆದರೆ ಕಾಲುವೆಯಾಗಿ ತುಂಗೆಯ ನೀರನ್ನು ಅಡವಿಗೆ ಒದಗಿಸಿದರೆ ಪಚ್ಚೆಯ ಪೈರಿನ ಭತ್ತದ ಕಟ್ಟೆಯ ಭಾಗ್ಯ ಕಂಡೇವು. ಎಂದಿಗೂ ಕರ್ನಾಟಕವು ಧರ್ಮ ಕರ್ಮಗಳ ತವರು ತಾನೆ? ಕರ್ನಾಟಕವು ಕೃಷ್ಣೆ ತುಂಗೆಯ ನೀರಿನಲ್ಲಿ ಗ್ರಹಣ ಪರ್ವಕಾಲದಲ್ಲಿ ಮೀಯಲಿ. ವಿಧವೆಯ ಕೆಂಪು ಸೀರೆಯು ಮಿಂದು ಮಡಿಯಾಗಲಿ. ಇದರ ಮೈದೊಳೆದ ಕೊಳಕು ನೀರು ಮಾತ್ರ ಎಲ್ಲಿ ರಾಜಮಹೇಂದ್ರಿಗೋ ಬೆಜವಾಡಾಕ್ಕೋ ಹರಿದು ಅಲ್ಲಿಯ ಭೂಮಿಯನು

ಸುವರ್ಣವಾಗಿಸಿದೆ. ಹೊನ್ನ ಮಳೆ ಬೇಕಾದರೆ ಸುರಿಯಲಿ ಅಲ್ಲಿ. ರಾಯಚೂರ ಜನ ಬೇಡಕಲಿತಿಲ್ಲ. ಅರಸು ತಾನಾಗಿ ಬಂದು ಕೊಡುವನಿಲ್ಲ. ಅದರೂ ಆಧುನಿಕ ಸುಧಾರಣೆಗಳು ಒಂದೊಂದೇ ಆಗಿ ಪತ್ತನವನ್ನು—ಸಿಂಗರಿಸಲುದ್ಯುಕ್ತವಾಗಿವೆ. ನಳವನ್ನು ಹಿಂಬಾಲಿಸಿ ವಿದ್ಯುದ್ದೀಪಗಳಾದುವು. ಸುಂದರ ಉಪವನಗಳಾದುವು. ಮಿಂಚುವ ಟಾರರೋಡುಗಳಾದುವು. ಊರಿಗೆ ಚೆಲುವೀಯುಲು ಎಲ್ಲಿ ಸಾಧ್ಯವೋ ಅಲ್ಲಿ ಹೊಸತನ್ನು ನಿರ್ಮಿಸುವ ಎತ್ತುಗಡೆ ನಡೆದಿದೆ. ರಾಯಚೂರು ಸುಂದರವೂ ಅಹುದು! ರಾಯಚೂರು ಸುಂದರವಲ್ಲದ್ದೂ ಅಹುದು. ಇಲ್ಲಿಯ ಸಾತ್‌ಖಚೇರಿ ನೋಡಬೇಕು. ಅದೊಂದು ಮೊಗಲ ಶಿಲ್ಪದ ಕಟ್ಟಡ. ಉನ್ನತ ದಿನ್ನಿಯ ಮೇಲಿದ್ದ ಈ ಮೊಗಲ ಶೀವಿಯನ್ನೇರಿ ಊರ ನೋಡಬೇಕು. ಅದರ ಮುಂದರಿಯುವ ಸಿಮೆಂಟು ರೋಡು, ಸಮಿಾಪದಲ್ಲಿ ಚಿಕ್ಕದೊಂದು ತೋಟದ ಆವರಣದಿಂದ ಕೂಡಿದ ವಿದ್ಯುಚ್ಛಕ್ತಿಯ ಮುದ್ದಾದ ಮಂದಿರ. ಅಲ್ಲಿಂದ ಕಾಣಬರುವ ರಮ್ಯವಾದ ಉಪವನ. ಬಂಗಲೆಗಳ ಸಾಲು, ನೋಡಿ ಹೋದವರು ರಾಯಚೂರು ಸುಂದರವೆನ್ನುವರು. ಊರನ್ನು ಕೊಂಡಿಗಳಂತೆ ಬಿಗಿದಿರುವ ಓಣಿಗಳು ಅದರ ಕೊಳೆ, ಹೊಲಗೇರಿ ನೋಡಿದ ಯಾರೂ ರಾಯಚೂರು ಸುಂದರವೆನ್ನುವದಿಲ್ಲ. ಇದೆಲ್ಲ ರಾಯಚೂರು ನಕಾಶೆಯೆಂದು ಹೇಳಿದರೆ ನಕಾಶೆಯ ರೇಖೆಗಳು ಯಾವ ಬಣ್ಣದ ಯಾವ ಗತಿಯ ಗೀರಿನ ಜೀವನಚಿತ್ರವನ್ನೊಳಗೊಂಡಿವೆ? ಕನ್ನಡವು ಯಾವ ರಂಗಿನಲ್ಲಿ ಕಾಣಲಿಕ್ಕಿದೆ?

ಊರ ಚೆಲುವಿನ ಚಲಚ್ಚಿತ್ರ ಮಹಲಿನಲ್ಲಿ ಯಾವ ನುಡಿಯ ಬಣ್ಣ ಕಾಣಲುಂಟು? ತಿಳಿಯದ ತೆಲುಗಾದರೂ ನೋಡಹೋಗುವವರ ಕೊರತೆಯಿಲ್ಲ, ಕನ್ನಡ ಚಿತ್ರಗಳ ತಯಾರಿಕೆಗೆ ಹೆದರುವವರನ್ನು ರಾಯಚೂರು ಕೈಚಾಚಿ ಕರೆಯುತ್ತದೆ. "ಏನ್ರಿ, ಕನ್ನಡನಾಡಿನಲ್ಲಿ ತೆಲುಗು ಚಿತ್ರಗಳ ಪ್ರವಾಹ" ಎಂದು ಚಿತ್ರಮಂದಿರದ ಮಾಲಿಕರನ್ನು ಕೇಳಿದ್ದಕ್ಕೆ ನನ್ನ ಬಾಯಿಗೆ ಕೀಲೀ ಹಾಕಿದರು. "ಅಹುದರಿ, ಇದು ವ್ಯವಹಾರ. ಆಗಲಿ, ಎಷ್ಟು ಕನ್ನಡ ಚಿತ್ರಗಳಿವೆ ಹೇಳ್ರಲ್ಲ" ಎಂದು ಅವರ ಉತ್ತರ. ರಾಯಚೂರಿಗೆ ತೆಲುಗು ಚಿತ್ರವಾದೀತು, ಮರಾಟೀ ಚಿತ್ರವಾದೀತು, ಕನ್ನಡ ಚಿತ್ರವಿಲ್ಲದ್ದರಿಂದ ಕನ್ನಡ ಚಿತ್ರ ನಿರ್ಮಾಣದಲ್ಲಿ ಕೈಹಾಕಿದರೆ ಬಂಗಾರದ ಕಣಿ ಇದೆಯೆಂದು ಕನ್ನಡ

ಶ್ರೀಮಂತರ ಉದ್ಯಮಗಾರರ ಲಕ್ಷ್ಯಕ್ಕೆ ಎಂದು ಬರಬಹುದು? ಕನ್ನಡ ಚಿತ್ರಗಳು ಹೊರನಾಡುಗಳಲ್ಲೂ ಹಬ್ಬಿಕೊಳ್ಳಲು ಪವಾಡವೇನೂ ಜರುಗ ಬೇಕಾದ್ದಿಲ್ಲ. ನಿರ್ಮಾಣ ಬೇಕಾಗಿದೆ; ನಿರ್ಮಾಣ. ರಾಯಚೂರಿನ ಚೇತನ ಪ್ರಗತಿ ಒಂಟಿಕಾಲಮೇಲೆ ಕುಂಟುತ್ತ ನಡೆದಿದೆಯೆಂದೇ ಹೇಳಬೇಕು. ಆದರೇ ನಂತೆ, ಹತ್ತಾರು ವರುಷಗಳ ಹಿಂದಿನ ರಾಯಚೂರು ಈಗ ಇಲ್ಲ. ಬಾಳುವೆ ಯಲ್ಲಿ ಬದಲಾವಣೆಗಳು ಅಂಜುತ್ತ, ಮರೆಯಿಂದ, ಇಣಕಿನೋಡಿ ಕಾದು, ಕಡೆಗೊಮ್ಮೆ ಬಂದುಬಿಟ್ಟವೆ. ಹೈದರಾಬಾದು, ಕ್ರಾಂತಿ ಪಾಂಚಜನ್ಯ ಮೊದ ಲನೆಬಾರಿ ಊದಿತು. ಆಗ ಏಕಕಾಲದಲ್ಲಿ ಒಂದರಹಿಂದೊಂದಾಗಿ ಕಾಂಗ್ರೆಸ್ ಸತ್ಯಾಗ್ರಹ, ಆರ್ಯಸಮಾಜ ಸತ್ಯಾಗ್ರಹ, ವಿದ್ಯಾರ್ಥಿಗಳ ಮುಷ್ಕರ. ರಾಯಚೂರಿಗೂ ಈ ಕೂಗು ಸಾಗಿಬಂದಿತು. ಭಾವನೆಯ ಕಾಮನಬಿಲ್ಲಿನಲ್ಲಿ ಒಂದು ಹೊಸ ಬಣ್ಣ ಸೇರಿ ಬೆಳಗಿತು. ಭೀತಿಯ ಒಂದು ಕಾಲಮೇಘ ಬೀಸಿದ ಬಿರುಗಾಳಿಯೊಂದಿಗೆ ಚದರಿ ಹೋಯಿತು. ಊರ ಬಗ್ಗೆ ಇಷ್ಟೆಲ್ಲಾ ಮಾಹಿತಿ ಮಾಡಿಕೊಟ್ಟೆ. ಆದರೂ ಊರ ನುಡಿಯ ಬಗ್ಗೆ ಏನು ಹೇಳಿದ್ದೇನೆ? ರಾಯಚೂರು ಕನ್ನಡನಾಡಿಗೆ ಸೇರಿದ್ದೆಂಬುದರ ಬಗ್ಗೆ ಎರಡು ಅಭಿಪ್ರಾಯ ವಿರಲಾರದು, ಎಂದು ಒಂದು ಸಮಾಧಾನ. ಆಗಲಿ ಅದೇ ಸಮಾಧಾನ ದೊಡನೆ ಇಲ್ಲಿ ಕನ್ನಡವು ಕನ್ನಡಕ್ಕೆ ಇರಬೇಕಾದ ಸ್ಥಾನವನ್ನೂ ಪಡೆದಿದೆ ಎಂದು ಹೇಳಲಾರೆ. ಕಛೇರಿಗಳಲ್ಲಿ ಯಾವ ಭಾಷೆ ಆಳುತ್ತಿದೆ? ಅಡಳಿತದಲ್ಲಿ ಯಾವ ಭಾಷೆ ಮನ್ನಣೆ ಹೊಂದಿದೆ? ಶಾಲೆಯಲ್ಲಿ ಶಿಕ್ಷಣ ಯಾವಭಾಷೆಯಲ್ಲಿ ದೊರೆಯುತ್ತಿದೆ? ಮುಖ್ಯವಾಗಿ ಜನತೆಯ ಭಾವನೆಯಲ್ಲಿ ಯಾವ ಭಾಷೆಗೆ ಗೌರವದ ಬೆಳಕೆ ಬಂದಿದೆ? ಉರ್ದು ಭಾಷೆಯ ಆಶ್ರಯದಲ್ಲಿ ಕನ್ನಡಕ್ಕೆ ಅಸ್ತಿತ್ವ ಇದೆಯಾದರೂ ತಲೆಬಾಗಿಯೇ ತನ್ನ ಸ್ಥಾನವನ್ನು ರಕ್ಷಿಸಿಕೊಂಡಿದೆ. ಶಾಲೆಯಲ್ಲಿ ಅದನ್ನು ಕಲಿಸುವ ಏರ್ಪಾಡು ಇದೆಯಾದರೂ ಹೆಚ್ಚಿನ ಪರಿ ಶ್ರಮ ಪಾಂಡಿತ್ಯ ಬೇಕಾದರೆ ಉರ್ದು ಪಾರ್ಶಿಗಳ ಶರಣುಹೋಗಬೇಕು. ಪ್ರಾಥಮಿಕ ಶಿಕ್ಷಣಕ್ಕಾಗಿ ಐನೋರ ಶಾಲೆ—ಕಟ್ಟೆ ತಪ್ಪಿಲ್ಲ. ಹೀಗೆ, ಕೆಳಗೆ ಏಣಿ ಇಲ್ಲ, ಮೇಲೆ ಮಂದಿರವಿಲ್ಲ, ನಡು ಅಟ್ಟೆ ಬಂದು ನಿಂತಿದೆ. ನೌಕರಿ ರಾಜ್ಯದಲ್ಲಿ ಉರ್ದು ಕೈಹಿಡಿದರೇನೇ ಗತಿ. ಕಾರಣವಿಲ್ಲದೆ ಕನ್ನಡ ಉಪೇಕ್ಷಿತ ವಾಗುವ ಕಾಲದಲ್ಲಿ ಲೌಕಿಕ ಜೀವನದಲ್ಲಿ ಅದರ ಉಪಯುಕ್ತತೆ ಇಲ್ಲದಾಗ

ಜನ ಅದನ್ನು ಮರೆಯುವುದು ಏನೂ ಹೆಚ್ಚೆನಿಸುವಂತಿಲ್ಲ. ಹೈದರಾಬಾದು ರಾಜಕಾರಣ ಅರಿಯಬೇಕಾದರೆ ಉರ್ದು ಪತ್ರಿಕೆಗಳಿಗೆ ಮಾರು ಹೋಗಬೇಕು. ಪ್ರಪಂಚದ ರಾಜಕಾರಣ ತಿಳಿಯಬಯಸಿದರೆ ಇಂಗ್ಲಿಷ್ ಪತ್ರಿಕೆಗೆ ಕೈಚಾಚ ಬೇಕು. ಕನ್ನಡ ಬೋರ್ಡುಗಳಿದ್ದರೂ ಉರ್ದು ಅಕ್ಷರದ ಬುಡದಲ್ಲಿ.

ಸಂಸ್ಕೃತಿಯ ಶಿಕ್ಷಣ ಸಾಹಿತ್ಯಗಳ ಮುನ್ನಡೆಯಾಗಿ ಏನನ್ನು ತೋರಲಿ? ಏನಿವೆ ಎಂದು ತೋರಲಿ ? ಏನಿವೆ ಎಂದು ಹೇಳಹೋಗುವ ದಕ್ಕಿಂತಲೂ ಏನು ಬೇಕೆಂದು ಹೇಳವುದು ಸರಿಯಾದೀತು. ಏನು ಬೇಕು ? ಮುಂಚೆ ಏನು ಬೇಕೆಂಬುದರ ಅರಿವು ಬೇಕು.

ಆಗ ಶಾಲೆ ಕಾಲೇಜು ಬೇಕೆನ್ನಿಸಿತು. ಕ್ಲಬ್, ವಾಚನಾಲಯ ಬೇಕೆನ್ನಿಸಿತು. ಸಂಘ ಸಂಸ್ಥೆಗಳು ಆದೀತು, ಮುದ್ರಣಾಲಯ, ಪುಸ್ತಕಾಲಯ ಬೇಕು, ಸಾಹಿತಿಗಳು ಬೇಕು. ಕಲಾವಂತರೂ ಬೇಕು. ಇವಾವೂ ಇಲ್ಲವಾ ದಾಗ್ಯೂ ಪತ್ರಿಕೆ ಮಾರುವ ಏಜಂಟರುಂಟು. ಪತ್ರಿಕೆಗಾಗಿ ಕಾದಿರುವ ಜನ ವರ್ಗವುಂಟು. ಜನರ ಶರೀರ ರಿಪೇರಿಮಾಡುವ ಹೊರಗಿನಿಂದ ಬಂದ ಆಂಧ್ರ ಡಾಕ್ಟರರೊಬ್ಬರು ದೇಹದೊಂದಿಗೆ ಮನಸ್ಸನ್ನು ಸರಿಮಾಡುವ ಇಚ್ಛೆಯಾಗಿ ಕನ್ನಡ ಪತ್ರಿಕೆಗಳ ಪ್ರಚಾರ ಕೈಕೊಂಡರು. ಒಂದು ವಾಚನಾಲಯ ಸ್ಥಾಪಿಸಿದರು. ರಾಯಚೂರಿನ ಜನತೆಯು ಕನ್ನಡವನ್ನು ಕನ್ನಡವಾಗಿಸಿಲ್ಲವಾದರೂ ಮನೆಮಠ ತನ್ನದೆನ್ನುವಂತೆ ಕನ್ನಡ ತನ್ನದಲ್ಲವೆಂಬ ಜನ ವಿರಳ. ಬಹಳ ದಿನಗಳಿಂದ ಕನ್ನಡಕ್ಕಾಗಿ ದುಡಿದ ಪುಣ್ಯ ಕರ್ನಾಟಕ ಸಂಘದ ಉಡಿಯಲ್ಲಿ ಬೀಳುತ್ತದೆ. ಕರ್ನಾಟಕ ಸಂಘವೆಂದರೆ ಜೋಶಿ ಎನ್ನಬಹುದು. ಮರಿ ಕರ್ನಾಟಕ ಸಂಘವೊಂದು ಹುಟ್ಟಿಕೊಂಡು ವರುಷಗಳು ಬೆಳೆದರೂ ಸಂಘ ವಿನ್ನೂ ಮರಿಯಾಗಿಯೇ ಉಳಿದಿದೆ. ಒಬ್ಬರು ಕಟ್ಟಿದ್ದ ರಾಷ್ಟ್ರೀಯ ಶಾಲೆ ಯೊಂದನ್ನು ಜನತೆ ಪೋಷಿಸಿಕೊಂಡೇನೋ ಬಂದಿದೆ. ಉಸಿರು ಮಾತ್ರ ತ್ರಾಸಿ ನಂತೆ ತೂಗಾಡುತ್ತಿದೆ. ತಳಹದಿ ಭದ್ರಗೊಳಬೇಕಾಗಿದೆ. ಮತ್ತೊಬ್ಬರು ಹುಡಿಗೆಯರ ಪ್ರಾಥಮಿಕ ಶಾಲೆ ತೆಗೆದಿದ್ದಾರೆ. ಆದರೆ ಆಗಬೇಕಾದ ಎಷ್ಟರಲ್ಲಿ ಇವು ಎಷ್ಟೂ ಅಲ್ಲ. ಊರಿಗೆ ಹೊಸದಾಗಿ ಟಾರುರೋಡು ಹಾಕಿದಾಗ ನನ್ನ ಗೆಳೆಯರೊಬ್ಬರು ಹೀಗೆಂದರು "ಅಚ್ಛಾ ಹುಯಿ, ಅಬ್ ಸಾಯಕಲ್ ಪೆ ಟೆನ್ನಿಸ್ ರ್‍ಯಾಕೆಟ್ ಲೇಕರ್—ಟಾರ್‌ರೋಡ್ ಪರ್ ಜಾನಾ ಕ್ಯಾ ಲುತ್ಫ

ಮಾಲೂಮ್ ಹೋತಾ ಹೈ” ನಿಜ. ಇದರಲ್ಲಿ ಸತ್ಯಾಂಶ ಬಹಳ ಇದೆ. ರಾಯಚೂರಿನ ಬಗೆಯೇ ಹೀಗೆ. ಯಾವುದೋ ಕಂಡು ಯಾವುದೋ ಮರೆ ಹೋಗುತ್ತವೆ. ಒಂದು ನೋಡಿ ತೃಪ್ತಿಯಾಗಿ ಇಲ್ಲದ ನೂರು ಕೊರತೆ ನಮ್ಮ ಕಲ್ಪನೆಗೆ ಸಹ ಬಾರದು. ಸರಕಾರೀ ಬಗೀಚಿನಲ್ಲಿ, ಗೌರವ ಅಧಿಕಾರಿ ಗಳ ಕ್ಲಬ್ಬಿನಲ್ಲಿ ಟೆನ್ನಿಸ್ ಆಟವಾಡಿ, ಸುಂದರವನದಲ್ಲಿ ಅಡ್ಡಾಡಿ, ಎಕ್ಸಪ್ರೆಸ್ ಗಾಡಿ ಬರುವ ವೇಳೆಗೆ ನಿಲ್ದಾಣದ ಪ್ರಕಾಶದ ಬುಡದಲ್ಲಿ ಸುಳಿದಾಡಿ, ಕೊನೆಗೆ ಮೋಟಾರಿನಲ್ಲೋ, ಸಾಯಕಲ್ಲಿನಲ್ಲೋ ಟಾರ್‌ರೋಡಿನ ಮೇಲೆ ಸರಾಗ ವಾಗಿ ಮನೆಸೇರಬಹುದು. ಆದರೆ ಇದು ಎಲ್ಲರ ಕೈಗೆ ಎಟಕುವದಿಲ್ಲ. ಇದ್ದೊಂದು ಇಂಥ ಕ್ಲಬ್ಬಿನ ದಿನಚರ್ಯೆಯಲ್ಲಿ ಇಲ್ಲದ ಕ್ಲಬ್ಬುಗಳ ಮರೆಯ ಬಹುದು. ನಾವು ನಾಲ್ಕು ಸುಧಾರಣೆಗಳಿಂದ ಸ್ವಾತಂತ್ರ್ಯವನ್ನೇ ಧ್ಯೇನಿಸದೆ ಇರಬಹುದು. ಕಾರಕೂನಿಕೆ ದೊರಕಿಸಿಕೊಂಡು, ಉನ್ನತ ಶಿಕ್ಷಣ ನ್ಯೂನ ತೆಯ ಕಡೆ ಗಮನಿಸುವದಿಲ್ಲ. ಕೋರ್ಟಿನಲ್ಲಿ ಬಹಸ್ (Argument) ಮಾಡಿಯೋ .ಕೇಳಿಯೋ ಹೊರಗೆ ಉಪನ್ಯಾಸವಿಲ್ಲವಾದರೂ ಚಿಂತಿಸದಿರು ತ್ತೇನೆ. ರಾಯಚೂರು ಏನು ಬೇಕೆಂದು ಅರಿತುಕೊಳ್ಳದಹೊರತು ಸುಧಾ ರಣೆಯ ಮಾತು ಗಾವುದ ದೂರ.

ರಾಯಚೂರಿನ ರೀತಿ ಕಿಚ್ಚಡಿಯ ರೀತಿ. ಮೊಗಲ ಕಟ್ಟಡ ರೀತಿಯ ಶ್ರೀಮದ್‌ಗಾಂಭೀರ್ಯದಿಂದ ನಿಂತ ಕಛೇರಿಗಳ ಕಾಣಿರಿ. ಗಾಂಭೀರ್ಯ ವನ್ನು ಉಪಹಾಸ ಮಾಡುವ ಪಾಶ್ಚಾತ್ಯ ರೀತಿಯ ರಮ್ಯ ವಿದ್ಯುದ್ದೀಪ ಮಂದಿರ, ಗೆಲುಮುಖದ ಬಂಗಲೆಗಳ ಕಾಣಿರಿ. ಉದ್ಯಾನದ ಹುಲ್ಲುಗಾವಲ ಮೇಲೆ ವಿಹರಿಸಿ ಹಸುರು ತಾಣದಲ್ಲಿ ಬಳುಕುವ ಲತೆಯ ಬಳಿ ಹೋಗಿರಿ. ಮುಂದೆ ಹೋಗದಿರಿ. ಸುತ್ತಲೂ ಆಳುದ್ದ ಎದ್ದ ಗೋಡೆಯ ಹಿಂದೆ ಅವಿತು ಕೊಂಡು ಕೂತ ಹೆಂಗಸರ ಕ್ಲಬ್ಬು, ಘೋಷಾ ಟೆನ್ನಿಸ್ ಕೋರ್ಟ ನೋಡದಿರಿ. ಈ ಬಗೆ ಇಲ್ಲಿಗೆ ಮುಗಿಯಿತೇ ? ಇದು ಎಲ್ಲಿಯ ಭಾಷೆ ? ಮುಸ್ಸಿರಮ್ ಮೇಲಿದ್ದ ಈಗ ಮುಸ್ತಿಕಲ್ ಆಗಿದೆ. ತಬಾದಿಲ್ ಆಗುವದಿತ್ತು. ಆಗಿದೆಯೋ ಇಲ್ಲೋ ” ರಾಯಚೂರು ಭಾಷೆಗೆ ಇಂಗ್ಲಿಷಿನ ಅವಾಂತರ ತಟ್ಟಿದರೂ ಉರ್ದು ಮಾತ್ರ ಬಿಡುವಂತಿಲ್ಲ. ರಾಯಚೂರು ಎಷ್ಟೋ ವಿಚಾರದಿಂದ ಸೋತಿದೆ. ಇದಕ್ಕೂ ಗೆಲ್ಲು ಇಲ್ಲದೆ ಹೋಗಿಲ್ಲ. ಶ್ರೀ. ಮಾಸ್ತಿಯವರ

'ಸುಬ್ಬಣ್ಣ' ಮನೆಬಿಟ್ಟು ಕಲ್ಕತ್ತೆಗೆ ಹೋಗುತ್ತಾ ರಾಯಚೂರಿನಲ್ಲಿ ಎಂಟು ದಿನಗಳ ವರೆಗೆ ತಂಗಿದನಂತೆ. ರಾಯಚೂರ ಮುಕ್ಕಾಲುವೀಸ ವ್ಯಾಪಾರ ಗುಜ್ಜರ, ಮಾರವಾಡಿಗಳ, ಮುಲತಾನಿಗಳ, ಪಾರ್ಸಿಗಳ ಹಿಡಿತದಲ್ಲಿ ಸಿಕ್ಕಿ ಹೋಗಿದ್ದರೂ ಉಡುಪಿಯ ಚಹಾ, ಬಸಿಯ ಲಾಂಛನದ ಬಾವುಟ ಈ ಊರಲ್ಲಿ ಊರಲಾಗಿಲ್ಲ. ಆದರೆ ಹೇಳಿಕೊಳ್ಳುವ ಒಂದು ಹೋಟೆಲಾಗಲಿ, ವಸತಿಗೃಹವಾಗಲಿ ಊರಲ್ಲಿ ಕಾಣಲಾರದು. ಪ್ರವಾಸಿಗಳು ಒಳ್ಳೆಯ ಕೂಳು ಸಿಗದೆ ಗೊಣಗಿದರೆ ಇದಕ್ಕೆ ಉಡುಪಿಯುವರು ಹೊಣೆಯಾಗರು.

—ವಿಹಾರಿ

---

# ಮಾನ್ವಿ

ಮಾನ್ವಿಯೊಂದು ಹಳ್ಳಿಯೆಂದೊಡನೆ ಗೋಲ್ಡ್ ಸ್ಮಿತ್ (Gold smith) ಕವಿಯ ಡೆಸರ್ಟೆಡ್ ವಿಲೇಜನ್ನು (Deserted Village) ನೆನೆಯದಿರಿ. ಮೈಸೂರು ಹಳ್ಳಿಯ ಚಿತ್ರವೊಂದನ್ನು ಕಲ್ಪಿಸದಿರಿ. ಇದು ಮೊಗಲಾಯಿ ಹಳ್ಳಿಯೊಂದರ ಮಾದರಿಯೆಂದರೆ ಮೂಗುಮುರಿಯುವವರಿದ್ದಾರೆ. ಜನ ಸಂಖ್ಯಾಮಾನದ ತುಲನೆಯಿಂದ ಇದನ್ನು ಹಳ್ಳಿ ಎನ್ನಲು ಮನಸೊಪ್ಪದು. ಈ ವಿಷಯವನ್ನು ಹಾಗೂ ತಾಲೂಕಿನ ಕೇಂದ್ರವೆಂಬ ಗಣನೆಯೊಂದನ್ನು ಬಿಟ್ಟರೆ ಉಳಿದೆಲ್ಲಾ ರೀತಿಯಿಂದಲೂ ಇದು ಹಳ್ಳಿಯೆನ್ನಿಸಿಕೊಳ್ಳುತ್ತದೆ. ಮಾನ್ವಿಯೋ ತನ್ನ ಮಡಿ, ಆಚಾರಸಂಪನ್ನತೆಯಿಂದ ಇಡೀ ರಾಯಚೂರು ಜಿಲ್ಹೆಯೊಳಗೆ ಹಿರಿದೆನಿಸಿ ಖ್ಯಾತಿವೆತ್ತಿದೆ. ಮಹಾಭಾರತಕಾಲದಿಂದಲೂ ಬಂದ ಈ ಸಂಪ್ರದಾಯವನ್ನು ಮಾನ್ವಿ ಎಂತಹ ಕಾಲದಲ್ಲೂ ರಕ್ಷಿಸಿಕೊಂಡು ಬಂದಿದೆ ಎಂದು ಈ ಊರ ಮಡಿವಂತರ ಹೆಮ್ಮೆ. ಪರೀಕ್ಷಿತ ಮಹಾರಾಜನು ತನ್ನ ಕೊನೆಯ ದಿನಗಳನ್ನು ಮಾನ್ವಿಯಲ್ಲಿ ಕಳೆದನಂತೆ. ಊರ ಸಮೀಪ ವಾಗಿದ್ದ ಹುಡೆಯೊಂದನ್ನು ತೋರುತ್ತ ರಾಜನು ಶಾಪದ ಸಾವಿನ ಹೆದೆಯಿಂದ ಕಾಪಾಡಿಕೊಳ್ಳಲು ಅಲ್ಲಿ ಅಡಗಿ ಕೂತಿದ್ದನೆಂದು ಇಲ್ಲಿಯ ಜನ ಕತೆ ಹೇಳು

ತ್ತದೆ. ಒಂದು ಹಾವು ಉಪಾಯದಿಂದ ಆತನನ್ನು ಕಚ್ಚಿದ ಬಳಿಕ ಈ ಊರ ಬೆಟ್ಟದ ಮೇಲೆ ಹರಿದುಹೋಗಲಾಗಿ ಅದರ ಮೈಜ್ವಾಲೆಯ ಕಾವಿನಿಂದ ಬೆಟ್ಟದ ಮೈಯುದ್ದ ಸುಮಾರು ಎರಡಡಿ ಅಗಲವಾಗಿರಬಹುದಾದ ಕಬ್ಬಿಣದ ಕಲ್ಲಿನಂತೆ ಕಪ್ಪಾದ ನಿಡುದಾರಿಯನ್ನು ತೋರುತ್ತಾರೆ. ಈ ವಾದ ಸಮರ್ಥನೆಗೆ ಏನೇನೋ ಪುರಾವೆಗಳ ಅವಶೇಷಗಳ ಬೆರಳು ಮಾಡುತ್ತಾರೆ. ಮೃತ ಜೀವಿಯ ಪುನಃ ಚೈತನ್ಯಗೊಳಿಸಲು ದೂರದ ಘನ ವೈದ್ಯರು ಧಾವಿಸಿದರು. ಆದರೆ ಇವರು ಬರುವ ವೇಳೆಗೆ ಶವವಾಗಲಿ ಶವಸಂಸ್ಕಾರದ ಕುರುಹಾಗಲಿ ಏನೂ ಉಳಿದಿರಲಿಲ್ಲವಾಗಿ ಬಂದ ವೈದ್ಯರು ನಿಷ್ಫಲರಾಗಿ ಹಿಂತಿರುಗಿದರೆಂದು ಕತೆ ಮುಂದರಿಯುತ್ತದೆ. ಬೆಟ್ಟವಾದರೊ ವಿವಿಧ ಗಿಡಮೂಲಿಕೆಗಳಿಗಾಗಿ ಹೆಸರು ಹೊಂದಿದೆ. ಊರು ಹೇಗೆ ಮಡಿಯ ಪರಂಪರೆಯನ್ನು ಕಾಯ್ದುಕೊಂಡು ಬಂದಿದೆಯೋ ಹಾಗೆ ಹಿಂದಿನ ಕಾಲದಲ್ಲಿ ಇದ್ದಿರಬಹುದಾದ ಬೆಟ್ಟದಲ್ಲಿ ಬೆಳೆವ ಈ ಮೂಲಿಕೆಗಳ ಪರಿಜ್ಞಾನವಾಗಲಿ ಉಪಯುಕ್ತತೆಯ ಬಗ್ಗೆಯನ್ನಾಗಲಿ ಕಾಯ್ದುಕೊಂಡು ಬರಲಿಲ್ಲ. ಇವನ್ನು ಅರಿತುಕೊಳ್ಳುವ ಸಾಹಸಕ್ಕೆ ಈಗಲೂ ಯಾರೂ ಕೈಹಾಕುವ ಗೋಜಿಗೆ ಹೋಗುವುದಿಲ್ಲ.

ಇಂತಹ ಚರಿತೆಯುಳ್ಳ ಬೆಟ್ಟವು ಕೆರೆಯನ್ನು ಮೈಗೆ ಹಾಕಿಕೊಂಡು ಇಂದಿಗೂ ಪ್ರಯೋಜನಕಾರಿಯಾಗಿದೆ. ಬೇಸಿಗೆಯ ಜಳದಿಂದ ಬೆಟ್ಟದ ಕಾವು ಪದತಳದಲ್ಲಿ ಹರಡಿಕೊಂಡಿದ್ದ ಎರಳೆ ಮನೆಯೊಳಗೆ ಬಡಿದರೆ ತಾಯಿ ತನ್ನಡಿಯ ಬಳಿ ಆಡುತ್ತಿರುವ ಪುಟ್ಟ ಮಕ್ಕಳ ಕೋಪದ ಹೊತ್ತಿನಾಗ ಬಡಿದ ಹಾಗೆಂದು ಶಿಖರದಿಂದ ಊರನ್ನೋಡುತ್ತ ನುಡಿದೆ. ನನ್ನೊಂದಿಗೆ ಬೆಟ್ಟವೇರಿದ್ದ ಪಟ್ಟಣವಾಸಿಗಳೆಂದು "ಹೋ! ಮಾನ್ವಿ ನೀರು ಕುಡಿದರೆ ಕವಿತೆ ಪುಟಿಯುವಂತೆ ಕಾಣುತ್ತದೆ" ಎಂದು ತುಂಟ ಕಣ್ಣುಗಳ ನನ್ನ ಮೇಲೆ ಚೆಲ್ಲಿದ. ಆದರೆ ಊರಿಗೋ ಮಳೆಯಿಂದ ನಿಂತ ಕೆರೆಯ ನೀರೇ ಗತಿ. ಕೆರೆ ಬತ್ತಿದಾಗ ಕೊಡಗಳು ನೀರಿಗಾಗಿ ಬೆಟ್ಟ ಹತ್ತಬೇಕು. ಊರು ಕೆರೆಯ ಕೊಳೆತ ನೀರು ಕುಡಿದು ಸುಂದರವಾದ ಕಟ್ಟಡವುಳ್ಳ ದವಾಖಾನೆಯನ್ನು ಪಡೆದಿದೆ ಎನಬಹುದು. ಊರಿನ ವೈಭವವೆಲ್ಲಾ ಹಿಂದೆ ಆಗಿಹೋದದ್ದು. ಕನ್ನಡ ನಾಡಿನ ದಾಸಕೂಟದಲ್ಲಿ ಪ್ರಸಿದ್ಧರಾದ ಕೆಲವರನ್ನು ಮಾನ್ವಿ ತನ್ನವರೆಂದು ಹೇಳಿಕೊಳ್ಳಬಹುದು. ಜಗನ್ನಾಥ ದಾಸರು ಕನ್ನಡ ಕೀರ್ತನೆಗಳನ್ನು

ಹಾಡಿದ್ದೂ, ವಿಜಯದಾಸರು ಬೆಳೆದದ್ದೂ ಇಲ್ಲಿಯೇ. ದಾಸಪಂಥದ ಪರಂಪರೆಯು ಮಾನ್ವಿ ಸುತ್ತುಮುತ್ತಲೂ ಇನ್ನೂ ಕಾಣಸಿಗುತ್ತದೆ. ಆದರೆ ಮಧ್ಯ ಕೆಲಕಾಲ ಊರು ಕನ್ನಡವನ್ನು ಮರೆತಂತೆ ತೋರುತ್ತದೆ. ಪೇಶ್ವೆಯರ ಆಳಿಕೆಗೆ ಮಾನ್ವಿ ಒಳಗಾದಾಗ ಮರಾಠಿಯು ಸರಕಾರಿ ಲೆಕ್ಕಪತ್ರಗಳಲ್ಲಿ ನಂತರ ಶಾಲೆಗಳಲ್ಲಿ ಕಾಲಿಟ್ಟಿತು. ನಿಜಾಮರ ಆಳಿಕೆಗೆ ಒಳಗಾದ ಮೇಲೆ ಬಹುಕಾಲ ಶಾಲೆಯ ಶಿಕ್ಷಣವು ಮರಾಠಿಯಲ್ಲೇ ಉಳಿಯಿತು. ಕೆಲಕಾಲದಿಂದ ಕನ್ನಡವು ತನ್ನ ಸ್ವಸ್ಥಾನವನ್ನು ಮತ್ತೆ ಪಡೆದುಕೊಂಡಿದೆ. ಆದರೆ ಊರ ಜನ ಜೈಮಿನಿಭಾರತ, ರಾಜಶೇಖರವಿಳಾಸ, ಕನ್ನಡ ಓದಿನ ಕೊನೆಯೆಂದು ತಿಳಿಯುತ್ತದೆ. ಇಡೀ ಜೈಮಿನಿಭಾರತವನ್ನು ಕಂಠಗತವಾಗಿ ಸರಾಗವಾಗಿ ಓದಬಲ್ಲ ವೃದ್ಧರು ಮಾನ್ವಿಯ ಹೆಮ್ಮೆ ಎಂದು ಹೇಳಬಹುದು. ಊರು ಓದುವುದು ಕನ್ನಡವೇ ಆದರೂ ಊರಿಗೆ ಕನ್ನಡ ಪತ್ರಿಕೆಗಳ ಪರಿಚಯ ಕಡಿಮೆಯೆನ್ನಬಹುದು. ವಾಚನಾಲಯವೇನೆಂಬುದನ್ನು ಊರು ಕಂಡರಿಯದು. ಮಾನ್ವಿ ಜನರು ಹುಟ್ಟ ಬುದ್ಧಿವಂತರೂ ಕುಶಲರು. ಇಲ್ಲಿಯ ಶಾಲೆ–ಕಟ್ಟೆಯನ್ನು ದಾಟಿ ಹೋದವರು ರಾಯಚೂರು ಹೈದರಾಬಾದದಲ್ಲಿ ಉನ್ನತ ಶಿಕ್ಷಣ ಹೊಂದಿ ಜೀವನದಲ್ಲಿ ಯಶಸ್ವಿಯಾಗಿದ್ದಾರೆ. ಮಾನ್ವಿ ಸಾಹಿತಿಗಳನ್ನೂ ಹೆತ್ತಿದೆ. ನಿಜಾಂ ಕರ್ನಾಟಕದ ಹೆಸರಾದ ಒಬ್ಬಿಬ್ಬ ಸಾಹಿತಿಗಳು ಇಲ್ಲಿಯವರು. ವ್ಯಾಪಾರಿಗಳಾದರೋ ತಮ್ಮ ಕಲೆಯಲ್ಲಿ ಚತುರರು. ಈ ಜನ ವ್ಯಾಪಾರದಲ್ಲಿ ರಾಯಚೂರು ದುಕಾನದವರ ಮೂಗು ಹಿಡಿಸುತ್ತಾರೆ. ಊರಿಗೆ ರೋಡು ಹಾಕಿದಂದಿನಿಂದ ಮೋಟರ್ ಗಾಡಿಗಳ ಓಡಾಟವು ಊರ ವ್ಯಾಪಾರವನ್ನು ಕೆಡಿಸಿತೆಂದು ಇಲ್ಲಿಯ ವ್ಯಾಪಾರಿಗಳು ಗೊಣಗಿದರೆ, ಮೋಟಾರು ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ಬಂದ ಹೋಟೆಲುಗಳಿಂದ ಊರ ಆಚಾರಕ್ಕೆ ಧಕ್ಕೆಯಾಯಿತೆಂದು ಮಡಿವಂತರು ಸೂರು ಸೇರಿಸುತ್ತಾರೆ. ಆಚಾರ ಭದ್ರತೆಯ ಯತ್ನದಿಂದ ಬ್ರಾಹ್ಮಣರ ಸೋಡಾ ತಯಾರಿಸುವ ಅಂಗಡಿಯಾಯಿತು. ಈಗ ಕುಲ ಕೆಡಿಸಿಕೊಳ್ಳದೆ ಜಾತಿಸಂಕರವಾಗದೆ ಸೋಡಾ ನೀರ ರುಚಿ ನೋಡಬಹುದು. ಹಿಂದೆ ಒಂದು ಕಾಲದಲ್ಲಿ ಬ್ರಾಹ್ಮಣ ವೀರಶೈವ ಪಂಗಡಗಳೂ ವಾದಗಳೂ ಘನತೆಗೇರಿದ್ದವು. ಆಗ ಎಷ್ಟೋ ಪಂಥದ ಗಡ್ಡಗಳು ಬೆಳೆದುವು. ಪೈಪೋಟಿಯಿಂದ ನಾಟಕ ಕಂಪೆನಿಗಳ ರಂಗತಾಲಿಮು ಊರ

ರಸಿಕತೆಯನ್ನು ಹೆಚ್ಚಿಸಿತು. ಕನ್ನಡ ನಾಟಕಗಳ ಸುರಿಮಳೆಯಾಯಿತು. ಜನರ ತಲೆಯು ವಿಷ್ಣುವಿನ ವಿರೋಧ ಶಿವ, ಶಿವನ ವಿರೋಧ ವಿಷ್ಣುವಿನ ಸರ್ವೋತ್ತಮತೆಯಿಂದ ತುಂಬಿತು. ಮಾನ್ವಿ, ರಾಯಚೂರು, ಗುಲ್ಬರ್ಗದ ಕೆಲವು ವಕೀಲರ ಕಿಸೆ ತುಂಬಿದ್ದಾದರೂ ಆಗಲೇ. ಈಗ ಈ ಜಗಳ ವಿಲ್ಲದಾಗ್ಯೂ ನಾಲ್ಕು ಜನ ಸೇರಿದಲ್ಲಿ ಒಬ್ಬರೊಬ್ಬರಾಡಿಕೊಳ್ಳುವುದೇ ಧರ್ಮ.

ಊರಿಗೆ ಮಾಧ್ಯಮಿಕ ಶಾಲೆಯೊಂದಿದೆಯಾದರೂ ಶಿಕ್ಷಣಕ್ಕಾಗಿ ಚಿಂತೆ ಹಚ್ಚಿಕೊಳ್ಳದೆ ಸುಖವಾಗಿದೆ. ಸುಧಾರಣೆಯ ಗಾಳಿಯ ಕಂಡರಿಯದು. ಸುಧಾರಕರು ಊರ ನೋಡಿಲ್ಲ. ಊರು ಸುಧಾರಕರ ಕಂಡಿಲ್ಲ. ಸೂಟನ್ನು ಬಿಕಿ ಬಿಕಿ ನೋಡುವ, ಮದುವೆಯಾಗದ ವಯಸ್ಸಾದ ದವಾಖಾನೆಯ ದಾಯಿಗಳನ್ನು ನೋಡಿ ಮುಸಿ ಮುಸಿ ನಗುವ ಜನವಿದೆ. ಇಲ್ಲಿ ನಡೆಯದ ಪುರಾಣವಿಲ್ಲ. ಇಲ್ಲಿಗೆ ಬಾರದ ಪುರಾಣಿಕನಿಲ್ಲ. ಕರ್ಮ ಅದೃಷ್ಟ ಎಲ್ಲರ ಬಾಯಲ್ಲಿ ನುರಿತ ಶಬ್ದಗಳು. ಸಾವಿಗೆ ಬೆಲೆ, ರೋಗಕ್ಕೆ ಕಾರಣವಿದೆಯೆಂದು ಯಾರಿಗೂ ಇಲ್ಲಿ ಅನ್ನಿಸುವಂತೆ ತೋರದು. ಮಳೆ ಊರ ಶುಚಿಮಾಡಬೇಕು. ವರ್ಷದ ನೀರು ಒದಗಿಸಬೇಕು. ಕೊಳಕು ನೀರು ಜನ ಕುಡಿದರೆ ಮಳೆ ವೇಳೆಗೆ ಬಾರದ ದೋಷ. ಸರಕಾರಕ್ಕೆ ಯಾವ ದರಕಾರ. ಹೆಣ್ಣಿನ ಮೇಲೆ ಗಂಡಿನ ವರ್ಚಸ್ಸು, ಬಡವರ ಮೇಲೆ ಧನಿಕರ ಅಧಿಕಾರ, ವರ್ಣಹೀನರ ಮೇಲೆ ಸವರ್ಣರ ದರ್ಪ; ಸನಾತನ ನಡತೆಯು ನಿಜವಾದ ರೂಪದಲ್ಲಿ ಮಾನ್ವಿ ಬೇರೆ ಊರುಗಳಿಗೆ ಶಾಲೆ ಹಾಕಬಹುದು—ಕನ್ನಡ ನಾಡಿನ ಹಳ್ಳಿಗಳು ಕನ್ನಡವನ್ನೊಂದೇ ಬಳಸಿದರೆ ಸಾಲದು. ಸುಧಾರಣೆಯ ಅರಿವೂ ಪ್ರಗತಿಯ ತಿಳಿವೂ ತಿಳಿಯಬೇಕಾಗಿದೆ.

—ವಿಹಾರಿ

# ಮಡಿಕೇರಿ

V for victory—ವಿಜಯದ ಗುರುತು 'ವಿ' ಎಂಬ ಪ್ರಚಾರ ಚರ್ಚಿಲ್ ಸಾಹೇಬರ ಇಂದಿನ ಯುದ್ಧಪ್ರಚಾರಸೂತ್ರವಾದರೆ ಅಂದಿನ ಕೊಡಗಿನ ರಾಜ ವೀರರಾಜೇಂದ್ರರ ರಾಜಮುದ್ರೆ 'ವಿ' ಎಂದೇ ಇತ್ತು. ಇಂದಿಗೂ ಮಡಿಕೇರಿಯಲ್ಲಿ ಅರಮನೆಯ ಬಾಗಿಲಿನ, ಕಂಬಗಳ ನಡುವೆ 'ವಿ' ಎಂಬ ಕನ್ನಡ ಅಕ್ಷರ ಹೊಳೆಯುತ್ತಲಿದೆ. ಹುಲಿಯ ಹಾಲನ್ನು ಮೆದ್ದ, ಹೆಬ್ಬಾವನ್ನು ಸೆಳೆದ, ಸೋಲ್–ಸಾವರಿಯದ ಕಲಿಗಳು ಕೊಡಗಿನ ಹಿರಿಯರು. ಇಂಥವರ ಹೆಗ್ಗುರುತು ವಿ–ಜಯವಲ್ಲದೆ ಸೋಲು ಹೇಗಾದೀತು? ಮಡಿಕೇರಿ ಈ ವಿಜಯಶಾಲಿಗಳ ರಾಜಧಾನಿಯಾಗಿತ್ತು. ಇಂದು ಕೊಡಗು ಪುಟ್ಟ ಪ್ರತ್ಯೇಕ ಪ್ರಾಂತವಾಗಿದ್ದು ಅದರ ಮುಖ್ಯಸ್ಥಳ ಮಡಿಕೇರಿ.

'ಮಡಿಕೇರಿಯ ಸಿರಿ ಮಲೆಗಳ ಮೇಲೆ ಬಾಲ ದಿನೇಶನ ಸುಂದರ ಲೀಲೆ' 'ಕೊಡಗು ಬೆಡಗಿನ ಬೀಡು ಸೌಂದರ್ಯದಮೃತಮಂ ಕುಡಿಯಿರೆಲ ಕಣ್ಗಳಿರ' 'ಮಡಿಕೇರೀಲಿ ಮಂಜು'–'ನಡೆದು ನೋಡು ಕೊಡಗಿನ ಬೆಡಗಂ'–ಎಂದು ನಾನಾ ಬಗೆಯಾಗಿ ಕನ್ನಡ ಕವಿಗಳು ಕೊಡಗಿನ ಬೆಡಗನ್ನು ಹಾಡಿ ಹರಸಿದ್ದಾರೆ. ಕಾವೇರಿಯ ಉಗಮ ಈ ನಾಡಿನಲ್ಲಿ. ಕಾಫಿ, ಕಿತ್ತಳೆ ಬೆಳೆವ ನಾಡು ಇದು. ಇದರ ಮುಖ ಮಡಿಕೇರಿ.

ಮಡಿಕೇರಿ ಸಮುದ್ರ ಪಾತಳಿಯಿಂದ ಬಲು ಎತ್ತರದಲ್ಲಿದೆ. ಇಲ್ಲಿ ಮಳೆ ಬಹಳ. ಕಡಿದಾದ ದಿನ್ನೆಗಳು, ಮಧ್ಯೆ ಮಧ್ಯೆ ಕೊರಕಲು ಕೊಳ್ಳಗಳು. ಇವುಗಳಲ್ಲಿ ನೆಲ ಕೊರೆದು ಮನೆ ಕಟ್ಟಿದ್ದಾರೆ. ಊರ ಜನಸಂಖ್ಯೆ ಏಳೆಂಟು ಸಾವಿರವೂ ಇಲ್ಲ. ಆದರೆ ಎರಡು ಮೈಲಿಯ ಒಂದು ರಸ್ತೆ ಊರ ನಡುವೆ ಹರಿದು ಹೋಗಿದೆ. ರಸ್ತೆಯ ಹಾವಿನ ನಡೆತ, ದಿಬ್ಬ–ಕೊಳ್ಳಗಳ ಏರಿಳಿತ. ಇಲ್ಲಿಯೂ ವಸತಿಗೆ ಅನುಕೂಲ ಮಾಡಿಕೊಂಡು ಜನ ಊರು ಕಟ್ಟಿದ್ದಾರೆ. ಈ ಉನ್ನತ ಪ್ರದೇಶದಲ್ಲಿ ವನರಾಜಿಯ ನಡುವೆ ನಿಂತಿರುವ ಈ ಊರು ರಮ್ಯ ವಾಗಿದೆ. ಮಡಿಕೇರಿಯನ್ನು ನೋಡಿದರೇ ಅಲ್ಲಿಯ ಸೊಬಗು ತಿಳಿದೀತು.

ಯುರೋಪಿಯನ್ನರು ಬಂದು ಸಾಗಲಾರದ್ದೆಂದು ಬಿಟ್ಟ ಇಲ್ಲಿನ ಭೂಮಿಯನ್ನು ಕಾಸಿಗೆ ಕೊಂಡುಕೊಂಡರು. ಕಾಫಿ ನೆಟ್ಟು ಈ ಮಣ್ಣಿನಲ್ಲಿ ಹೊನ್ನು ಮಾಡಿದರು. ಇಲ್ಲಿನ ಜನ ಕ್ರಿ. ಶ. ೧೮೩೪ ರಲ್ಲಿ ತಮ್ಮನ್ನು ಬ್ರಿಟಿಶರಿಗೆ ಕೊಟ್ಟುಕೊಂಡರು. ಆಳುವ ರಾಜರ ಬಣ್ಣದ ಈ ಚತುರ ತೋಟಿಗರಿಗೆ 'ದೊರೆ' ಗಳೆಂದರು. ಈ ಎರಡಕ್ಷರದ 'ದೊರೆ' ಎಂದು ಕರೆಯುವ ಮನೋವೃತ್ತಿಯೊಡನೆ ದಾಸ್ಯ ಉದಿಸಿ ಬಂತು. ಹುಲಿಯ ಹಾಲನ್ನು ಮೆದ್ದ ಕಲಿಗಳು ದಾಸಾನುದಾಸರಾದರು. ಬಂದ ಬಿಳಿಯರೆಲ್ಲ ದೊರೆಗಳಾದರು. ಆಳುವ ಕುಲದಲ್ಲಿ ಹುಟ್ಟಿದ ಕೊಡಗರು ಬಿಳಿಯರ ಆಳಾದರು.

ಇಂದು ಸ್ವಾತಂತ್ರ್ಯದ ಕಾವು ಕೊಡಗಿಗೂ ತಗಲಿದೆ. 'ದೊರೆ' ಎಂದರೆ ಅಸಡ್ಡೆ ತೋರಿವೆ. ಶತಮಾನದಿಂದ ನೆಲಸಿದ ಬಿಳಿಯರು ಒಬ್ಬೊಬ್ಬರಾಗಿ ಕಾಲ್ದೆಗೆಯುತ್ತಿದ್ದಾರೆ. ಕಲಿಗಳ ವಂಶಜರೇ ಅರಿತು ಕಾಫಿ ಬೆಳೆಯುತ್ತಿದ್ದಾರೆ. ಕೊಡಗು ಕಮಿಶನರ ಆಫೀಸು ಬೆಂಗಳೂರು ದಂಡಿನಿಂದ ಮಡಿಕೇರಿಗೇ ಬಂದಿದೆ. ಕೂರ್ಗ ಕಮಿಃಶನರ ಪಟ್ಟ ಕೊಡಗು ಜನಕ್ಕೇ ದಕ್ಕಿದೆ.

ಕೊಡಗು—ಜನಾಂಗ ಮೊದಲಿನಿಂದಲೂ ಶೂರ ಜನಾಂಗವೆಂದು ಹೇಳಲಿಲ್ಲವೇ ? ತಮ್ಮ ದೊರೆಯನ್ನು ಕಳೆದುಕೊಂಡು ಬ್ರಿಟಿಶರಿಗೆ ಆತ್ಮಾರ್ಪಣ ಮಾಡಿಕೊಂಡ ಒಂದು ಶತಕದಲ್ಲಿಯೇ ಕಲ್ಚರ್ ದೊರೆಗಳ ಪ್ರಭಾವದಿಂದ ಸ್ವಾಭಿಮಾನ ಮರೆತು ತನ್ನತನವನ್ನು ಕಳೆದುಕೊಂಡಿತು ಈ ಜನಾಂಗ. ಕನ್ನಡ ನಾಡಿನ ಉಳಿದ ಕಡೆಗಳಿಗಿಂತ ನಿರಕ್ಷರತೆ ಕಡಿಮೆ ಕೊಡಗಿನಲ್ಲಿ. ಆದರೆ ಎಲ್ಲಾ ಆಡಂಬರದ ಸೆಳೆತ. ಕೊಡಗಿನ ಕಲಿಗಳ ವೇಷ ಭೂಷಣಗಳು ಇಂದಿಗೆ ಹಬ್ಬದ ತೊಡಿಗೆಗಳಾಗಿ ಮಾತ್ರ ಉಳಿದಿವೆ. ಉಳಿದ ದಿನಗಳಲ್ಲೆಲ್ಲಾ ಎಲ್ಲಾ ಸಾಹೇಬರ ಶಿಸ್ತು. ಸೂಟು ಬೂಟಿನ ವ್ಯವಹಾರ. ಮಡಿಕೇರಿಯಲ್ಲಿ ಮುಕ್ಕಾಲುಪಾಲು ಶ್ರೀಮಂತರ ಮನೆಗಳೆಲ್ಲಾ ಸಾಹೇಬರ ಮನೆಗಳೇ ಎನ್ನಬಹುದು. ತಂದೆ ತಾಯಿ ಎಲ್ಲಾ ಪಪ್ಪಾ ಮಮ್ಮಾ. ಬಿಳಿಯರ ಕಾರ್ಯಕುಶಲತೆಯನ್ನೂ, ಬುದ್ಧಿಶಕ್ತಿಯನ್ನೂ ಅನುಕರಿಸಿದ್ದರೆ ಈಗಿನ 'ಅಣಕದ' ಬದಲು ಮುಂಚಿನ ಶೀಶ್ರೀಯೇ ಕಾಣುತ್ತಿತ್ತೇನೋ. ಕೊಡಗು ಒಂದೇಕೆ—ಭಾರತದಲ್ಲೇ ಈ ದುರ್ವಿಲಾಸ ನಡೆದಿದೆ.

ಕವಿಗಳು ಹಾಡಿದ ಮಡಿಕೇರಿಯ ಸೊಬಗು ಇಲ್ಲಿಯ ಜನರ ನಿಸರ್ಗ-ಜನ್ಯ ಸೌಂದರ್ಯ ಪ್ರಿಯತೆಯ ದ್ಯೋತಕವಾಗಿದೆ. ಈ ಊರಲ್ಲಿ ಪ್ರತಿ ಮನೆಯ ಅಂಗಳವೂ ಒಂದು ಹೂದೋಟವೆಂದರೆ ಅತಿಶಯೋಕ್ತಿಯಾದೀತು. ಒಂದು ಹೂದೋಟದ ಮಗ್ಗುಲಲ್ಲಿ ಒಂದು ಮನೆಯೆನ್ನಿ ಹಾಗಾದರೆ. ಗುಲಾಬಿ ಕೊಡಗಿನಲ್ಲಿ ಅಡವಿಯಾಗಿದೆ. ಮಡಿಕೇರಿಯ ಒಂದು ಬೀದಿಗೆ ರೋಜಬ್ಯಾಂಕರೋಡ ಎಂದು ಹೆಸರಿಸಿದ್ದಾರೆ. ಜನರು ಬಹುಶಃ ಗೌರ ಕಾಯರು. ಗಂಡಸರೆಲ್ಲ ಸಾಹೇಬರ ಶಿಸ್ತಿನವರಾದರೂ ಹೆಂಗಸರು ಮಾತ್ರ ಮೂಲ ಕೊಡಗಿತಿಯ ಸಂಪ್ರದಾಯದ ಉಡಿಗೆ ಉಡುತ್ತಾರೆ. ಇಲ್ಲಿನ ಹೆಂಗಳೆಯರ ವೇಷವೊಂದು ಭೂಷಣಪ್ರಾಯವಾದದ್ದು. ಮುಂಬೈ ಮಹಿಳೆಯದು ತೆರೆದ ತೋಳಾದರೆ ಕೊಡಗಿತಿಗೆ ಮುಂಗೈವರೆಗೆ ಅಂಗಿಯಿದೆ. ಹಿಂದೆ ನೆರಿಗೆ ಹಾಕಿದ ತೆಳ್ಳನೆಯ ಸೀರೆ. ಬೈತಲೆ ಕಾಣುವಂತೆ ಅರ್ಧ ತಲೆಯ ಹಿಂದೆ ಜರದಂಚಿನ ತಲೆಕಟ್ಟಿನ ವಸ್ತ್ರ ಜಡೆಯೊಡನೆ ಇಳಿದು ಹೋಗಿರುತ್ತದೆ. ಇಲ್ಲಿನ ಜನಕ್ಕೆ ಉಂಡು ಉಡಲು ತಕ್ಕಮಟ್ಟಿನ ಅನುಕೂಲವೂ ಇದೆ. ಅಂತೆಯೆ ಆರೋಗ್ಯವಂತರಾಗಿ ಸುಂದರಕಾಯರಾಗಿದ್ದಾರೆ.

ಕೊಡಗರದು ಒಂದು ಪ್ರತ್ಯೇಕ ಭಾಷೆಯಿದೆ. ಅದು ದ್ರಾವಿಡ ಭಾಷೆಗಳ ಕಲಸುಮೇಲೋಗರ. ಅದಕ್ಕೆ ಲಿಪಿಯಿಲ್ಲ. ಜನತೆಯ ಭಾಷೆ ಕನ್ನಡವೇ. ಆಳಿದ ರಾಜರು ವೀರಶೈವರು; ಕನ್ನಡಿಗರು. ಕನ್ನಡದಲ್ಲಿ ಮೊಟ್ಟಮೊದಲು ಅಚ್ಚಾದ ಪುಸ್ತಕ 'ಕೊಡಗಿನ ರಾಜೇಂದ್ರನಾಮೆ' ಯೆಂದು ಹೇಳುತ್ತಾರೆ. ಇಲ್ಲಿಯದು ಕನ್ನಡ ಸಂಸ್ಕೃತಿಯೇ. ಇತ್ತ ಮೈಸೂರು; ಅತ್ತ ಕನ್ನಡ ಜಿಲ್ಲೆ. ಮಧ್ಯದ ಗಿರಿಶ್ರೇಣಿ ಕೊಡಗು.

ಇಂದು ಕೊಡಗರು ಬ್ರಿಟಿಶ್ ಪ್ರಜೆಯಾದರೂ ಆವರಿಗೆ ಇತರ ಕಡೆಯವರಿಗಿಂತ ಹೆಚ್ಚಿನ ಸವಲತ್ತು ಇದೆ. ಜಮ್ಮಾ, ಉಂಬಳಿಗಳೆಂದು ಕರೆಯುತ್ತಾರೆ ಅದಕ್ಕೆ. ಕಾಡಪಶುಗಳಿಂದ ತಮ್ಮನ್ನು ರಕ್ಷಿಸಿಕೊಳ್ಳುವುದಕ್ಕೆ ಕೋವಿ ಹಿಡಿಯುವ ಅಧಿಕಾರ ಪ್ರತಿಯೊಬ್ಬ ಕೊಡಗಿನ ಪ್ರಜೆಗೆ ಇದೆ. ಹಿಂದಿನ ವೀರರಾಜ, ಲಿಂಗರಾಜ ಅರಸರ ಈ 'ಜಮ್ಮಾ' ವನ್ನು ಬ್ರಿಟಿಶ ರಾಜರೂ ಕಸಿದುಕೊಳ್ಳಲಿಲ್ಲ. ಕೊಡಗರು ತಮ್ಮನ್ನು ತಾವೆ ಕೊಟ್ಟುಕೊಂಡ ಆತ್ಮಾರ್ಪಣದ ಕಾಣಿಕೆಯೇನೋ ಇದು. ಈಚೆಗೆ ನ್ಯಾಯವಿಧಾಯಕ ಸಭೆಯೊಂದು ದೊರೆತಿದೆ ಕೊಡಗಿಗೆ.

ಕನ್ನಡಜಿಲ್ಲೆಯಿಂದ ಬಹುಕಾಲದ ಹಿಂದೆ ಕೆಲವು ಕುಟುಂಬದವರು ಇಲ್ಲಿಗೆ ಬಂದು ನೆಲೆ ನಿಂತರು. ಅವರು ಈಗ ಕೊಡಗಿನಲ್ಲೆಲ್ಲ ಹರಡಿಕೊಂಡು ಗೌರವದಿಂದ ಬಾಳುತ್ತಿದ್ದಾರೆ. ಇಂದಿಗೂ ಕಾಫಿಕೊಯ್ಯಲು ಕನ್ನಡ ಜಿಲ್ಲೆಯ ಕೂಲಿಗಳೇ ಬರಬೇಕು. ಹೀಗೆ ಬಂದ, ಬರುವ ಜನ ಹೆಚ್ಚಾಗಿ ತುಳುವ ಜನ, ಕನ್ನಡ ಜನ. ಹೀಗಾಗಿ ಇಲ್ಲಿನ ವ್ಯವಹಾರವೆಲ್ಲ ಕನ್ನಡ.

೧೫೮೧ ಚದರು ಮೈಲಿ ವಿಸ್ತೀರ್ಣವುಳ್ಳ ಒಂದೂವರೆ ಲಕ್ಷಕ್ಕೆ ಸ್ವಲ್ಪ ಹೆಚ್ಚಿನ ಜನವಸತಿಯುಳ್ಳ ಈ ಪುಟ್ಟ ಪ್ರಾಂತ ಪ್ರತ್ಯೇಕ ರಾಜ್ಯವ್ಯವಸ್ಥೆಯಿಟ್ಟುಕೊಂಡು, ಈವರೆಗೆ ಸಾಗಿಬಂದಿದೆ. ಆದರೆ ಇಂದಿನ ರಾಜ್ಯವ್ಯವಸ್ಥೆಯು ಈ ಪುಟ್ಟ ಪ್ರಾಂತದ ಆದಾಯಕ್ಕೆ ಜಡವಾಗಿರುವುದು ಸ್ವಾಭಾವಿಕ.

ಕಾಂಗ್ರೆಸ್ಸಿನ ಭಾಷಾವಾರ ಪ್ರಾಂತ ರಚನೆಯ ಯೋಜನೆಯಲ್ಲಿ ಕೊಡಗು ಕರ್ನಾಟಕ ಪ್ರಾಂತದಲ್ಲಿ ಸೇರ್ಪಡೆಯಾಗಿದೆ. ನಾಳಿನ ಏಕೀಕರಣದ ಮೊದಲ ಹೆಜ್ಜೆ ಬ್ರಿಟಿಶ್ ಕನ್ನಡನಾಡು ಎಲ್ಲಾ ಒಂದು ಎಂದಾದರೆ ಕೊಡಗು ಕರ್ನಾಟಕದಲ್ಲಿಯೇ ಸೇರಬೇಕು. ಆದರೆ ಕೊಡಗರಿಗೆ ಪ್ರತ್ಯೇಕತೆಯ ಪ್ರೇಮ ಇನ್ನೂ ಇದೆ. ರಾಜ್ಯಭಾರಕ್ಕೆ ಕಷ್ಟವಾದರೂ ಜನಾಂಗದ ಹಿತವಿದೆಯೆಂದು ಅವರ ಆಸೆ. ಮೊನ್ನಿನ 'ಕಸ್ತೂರಿ ಬಾ' ನಿಧಿ ಕರ್ನಾಟಕದಿಂದ ಬೇರೆಯಾಗಿಯೇ–ಪ್ರತ್ಯೇಕ ಕೊಡಗಿನ ನಿಧಿಯಾಗಿಯೇ–ಅರ್ಪಿತವಾಯಿತು. ಮೈಸೂರಿನಲ್ಲಿ ಐಕ್ಯವಾಗುವ ಮೋಹವೂ ಕೆಲವರಿಗೆ ಇದೆ.

ಇಂದಿನ ಜಾಗತಿಕ ಯುದ್ಧದ ಹೋಮದಲ್ಲಿ ಉಳಿದ ಬೂದಿಯಿಂದ ನಾಳಿನ ರಾಷ್ಟ್ರ ನಿರ್ಮಾಣವಾಗಲಿದೆ. ಕೊಡಗು ಪ್ರತ್ಯೇಕವಾಗಿಯಂತೂ ಉಳಿಯಲಾರದು. ಕನ್ನಡ ಭಾಷೆಯ ಪ್ರಾಂತದಲ್ಲಿ ಮೈಸೂರು ಬರುವಂತಾದರೆ (ದೂರದ ಆಸೆ) ಕೊಡಗು ಒಳಗೊಂಡೇ ಇರುತ್ತದೆ. ಸಂಸ್ಥಾನಗಳು ಬೇರೆ ಉಳಿದರೆ ಕಾವೇರಿಯ ಪ್ರವಾಹದೊಂದಿಗೆ ಕೊಡಗು ಮೈಸೂರಿಗೆ ಸೇರಿದರೂ ಸೇರೀತು. ಮೈಸೂರಾದರೇನು– ಕನ್ನಡದ ಬಾವನ್ನದುಸಿರು. ಎಂತೂ ಕೊಡಗು ಕನ್ನಡದಿಂದ ತಪ್ಪಿಸಿಕೊಳ್ಳಲಾರದು. ಅದೇ ನಮ್ಮ ಭಾಗ್ಯ.

— ದತ್ತಾತ್ರೇಯ ಕುಲಕರ್ಣಿ